ಅನುಗುಣವಾಗಿ ಇಬ್ಬರು ಶ್ಯೂರಿಟಿದಾರರಿಂದ ಬಾಂಡ್ ಪತ್ರವನ್ನು ಸಲ್ಲಿಸಿದಲ್ಲಿ, ಸದರಿ ವಾಹನವನ್ನು ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಲಾಗುವುದೆಂದು ಈ ಪ್ರಾಧಿಕಾರದಿಂದ ದಿ:10-2-2010 ರಂದು ನೋಟೀಸುಗಳನ್ನು ಅರ್ಜಿದಾರರಿಗೂ ಹಾಗೂ ಅವರ ಪರ ವಕೀಲರಿಗೂ ನೋಂದಣಿ ಅಂಚೆ ಮೂಲಕ ನೀಡಲಾಗಿದ್ದರೂ, ಯಾವುದೆ ದಾಖಲಾತಿಗಳೊಂದಿಗೆ ಈ ಪ್ರಾಧಿಕಾರಕ್ಕೆ ಉತ್ತರವನ್ನು ಸಲ್ಲಿಸಿರುವುದಿಲ್ಲ ಹಾಗೂ ರಕ್ಷಣಾ ಸಾಕ್ಷಿಯನ್ನು ಕೂಡಾ ಹಾಜರುಪಡಿಸಿರುವುದಿಲ್ಲ. ಆದುದರಿಂದ ಪ್ರಕರಣವನ್ನು ಮುಂದುವರಿಸಲು ಅರ್ಜಿದಾರರು ಉತ್ಸುಕರಾಗಿಲ್ಲ ಎಂಬುವುದನ್ನು ಈ ಪ್ರಾಧಿಕಾರವು ಮನದಟ್ಟು ಮಾಡಿಕೊಂಡು ಹಾಗೂ ತನ್ನ ವಾಹನದಲ್ಲಿ ತಾನು ಶಾಮೀಲಾಗದೆ ಅಕ್ರಮ ಮದ್ಯಸಾರ ಸಾಗಾಣಿಕೆಯಾಗಿರುವ ಬಗ್ಗೆ ಯಾವುದೇ ದಾಖಲಾತಿಗಳನ್ನು ಹಾಗೂ ಪುರಾವೆಗಳನ್ನು ಹಾಜರುಪಡಿಸದಿರುವ ಕಾರಣಕ್ಕೆ ಸದರಿ ವಾಹನದಲ್ಲಿ ವಾಹನ ಮಾಲೀಕರು ಆರೋಪಿಗಳೊಂದಿಗೆ ಕೂಡಿಕೊಂಡು ಅಕ್ರಮವಾಗಿ ಮಾರುತಿ ಓಮಿನಿ ಕಾರಿನಲ್ಲಿ ಯಾವುದೇ ರಹದಾರಿ ಪತ್ರವಿಲ್ಲದೆ ಮದ್ಯಸಾರ ಸಾಗಣಿಕೆಯಾಗಿರುವುದು ಸಾಬೀತಾಗಿರುತ್ತದೆ.

ಆದುದರಿಂದ ಅಕ್ರಮ ಮದ್ಯಸಾರದ ಸಾಗಾಟ ತನ್ನ ತಿಳುವಳಿಕೆಗೆ ಬಾರದೆ ನಡೆದಿದೆ ಎಂಬುವುದನ್ನು ಸಾಕ್ಷ್ಯಾಧಾರಗಳೊಂದಿಗೆ ಸಾಬೀತುಪಡಿಸುವುದು ವಾಹನ ಮಾಲೀಕರ ಆದ್ಯ ಹೊಣೆಗಾರಿಕೆಯಾಗಿರುತ್ತದೆ. ಈ ಕಾರಣದಿಂದ ವಾಹನ ಮಾಲೀಕರು ಅವರ ವಾಹನದಲ್ಲಿ ಅಕ್ರಮವಾಗಿ ಮದ್ಯಸಾರವನ್ನು ಸಾಗಾಣಿಕೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ, ಅಕ್ರಮ ಮದ್ಯಸಾರದ ಸಾಗಾಟಕ್ಕೆ ಬಳಸಿದ ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43 (ಎ) ರಡಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುವುದರಿಂದ, ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ಮಾರುತಿ ಓಮಿನಿ ಕಾರು ಸಂಖ್ಯೆ: ಕೆಎ–19–ಎನ್–674 ನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ/28/ಡಿಟಿಸಿಆರ್/2009-10 ದಿ: 17-08-2010**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಾಲಂ 43 (ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, ನಿಯಮ 43 (ಬಿ) ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಪೊಲೀಸ್ ನಿರೀಕ್ಷಕರು, ಪುತ್ತೂರು ನಗರ ಪೊಲೀಸ್ ಠಾಣೆ,ಪುತ್ತೂರು ಇವರ ತಕ್ಷೀರು ಸಂ:159/2009 ದಿ:21-7-2009 ರಲ್ಲಿ ಜಪ್ತುಪಡಿಸಿರುವ ಮಾರುತಿ ಓಮಿನಿ ಕಾರು ಸಂಖ್ಯೆ: ಕೆಎ–19–ಎನ್–674 ನ್ನು ನಿಯಮ 43 ಎ(2) ರಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿ:17-08-2010 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ**

ಪ್ರಾ.ಸಾ–1: ಶ್ರೀ.ಶ್ರೀಕಾಂತ್.ಕೆ, ಪೊಲೀಸ್ ನಿರೀಕ್ಷಕರು, ಪುತ್ತೂರು ನಗರ ಪೊಲೀಸ್ ಠಾಣೆ,
ಪುತ್ತೂರು.

ಪ್ರಾ.ಸಾ–2: ಶ್ರೀ.ಚಿದಾನಂದ ರೈ, ಪಿ.ಸಿ.1388, ಪುತ್ತೂರು ನಗರ ಪೊಲೀಸ್ ಠಾಣೆ, ಪುತ್ತೂರು.

ಪ್ರಾ.ಸಾ–3 : ಶ್ರೀ.ಶಿವ ಪ್ರಸಾದ್, ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ, ಪುತ್ತೂರು.

**ಅನುಬಂಧ–2**

**ಫಿರ್ಯಾದುದಾರರು ಹಾಗೂ ತನಿಖಾಧಿಕಾರಿಯವರ ಪರ ಮಂಡಿಸಲಾದ ದಾಖಲಾತಿಗಳು**

ನಿಶಾನೆ ಪಿ–1 : ಮಹಜರಿನ ಪ್ರತಿ
ನಿಶಾನೆ ಪಿ–1A : ಮಹಜರಿನಲ್ಲಿ ಪ್ರಾ.ಸಾ.1ರವರ ಸಹಿ.
ನಿಶಾನೆ ಪಿ–1B : ಮಹಜರಿನಲ್ಲಿ ಪ್ರಾ.ಸಾ.2ರವರ ಸಹಿ.
ನಿಶಾನೆ ಪಿ–2 :. ಪ್ರಾ.ಸಾ.1ರವರ ವರದಿ. ರಾಸಾಯನಿಕ ವರದಿ
ನಿಶಾನೆ ಪಿ–2A : ವರದಿಯಲ್ಲಿ ಪ್ರಾ.ಸಾ.1ರವರ ಸಹಿ.
ನಿಶಾನೆ ಪಿ–3 : ಪ್ರಥಮ ಮಾಹಿತಿ ವರದಿ.
ನಿಶಾನೆ ಪಿ–3 A : ಪ್ರಥಮ ಮಾಹಿತಿ ವರದಿಯಲ್ಲಿ ಪ್ರಾ.ಸಾ.1ರವರ ಸಹಿ.
ನಿಶಾನೆ ಪಿ–4 : ವಾಹನದ ಬಿ ಎಕ್ಸ್‌ಟ್ರ್ಯಾಕ್ಟ್ ವರದಿ.
ನಿಶಾನೆ ಪಿ–5 : ಪ್ರಾ.ಸಾ.1ರವರು ಈ ಪ್ರಾಧಿಕಾರಕ್ಕೆ ಸಲ್ಲಿಸಿದ ವರದಿ.
ನಿಶಾನೆ ಪಿ–5A : ಸದರಿ ವರದಿಯಲ್ಲಿ ಪ್ರಾ.ಸಾ.1ರವರ ಸಹಿ.
ನಿಶಾನೆ ಪಿ–6 : ಪ್ರಾ.ಸಾ.3 ರವರಿಗೆ ಬರೆದ ವರದಿ.
ನಿಶಾನೆ ಪಿ–6A : ಸದರಿ ವರದಿಯಲ್ಲಿ ಪ್ರಾ.ಸಾ.1ರವರ ಸಹಿ.
ನಿಶಾನೆ ಪಿ–7 : ರಾಸಾಯನಿಕ ವರದಿ.

ನಿಶಾನೆ ಪಿ–8 : ಪ್ರಾ.ಸಾ.3 ರವರು ಈ ಪ್ರಾಧಿಕಾರಕ್ಕೆ ಸಲ್ಲಿಸಿದ ವರದಿ..

ನಿಶಾನೆ ಪಿ–8A : ಸದರಿ ವರದಿಯಲ್ಲಿ ಪ್ರಾ.ಸಾ.3 ರವರ ಸಹಿ.

ನಿಶಾನೆ ಪಿ–9 : ಮೋಟಾರು ನಿರೀಕ್ಷಕರು, ಪುತ್ತೂರು ಇವರ ಮೌಲ್ಯಮಾಪನ ವರದಿ.

**ಅನುಬಂಧ–3**

ವಾಹನ ಮಾಲೀಕರ ಪರ ವಿಚಾರಣೆಗೆ ಯಾರೂ ಹಾಜರಾಗಿರುವುದಿಲ್ಲ.

**ಅನುಬಂಧ–4**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ಸಾಕ್ಷಿದಾರರು : –ಇಲ್ಲ–

**ನೂರ್ ಮಹಮ್ಮದ್ ಹುಸೇನ್**

ಪಿ.ಆರ್.1391    ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದ.ಕ.ಜಿಲ್ಲೆ,**
**ಮಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ: ಎಸ್‌ಡಿಕೆ/57/ಡಿಟಿಸಿಆರ್/2009–10, ದಿನಾಂಕ:27–07–2010**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್

ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:–**

ಪೊಲೀಸ್ ಉಪ ನಿರೀಕ್ಷಕರು
ಬಂಟ್ವಾಳ ನಗರ ಪೊಲೀಸ್ ಠಾಣೆ, ಬಂಟ್ವಾಳ

**ಆರೋಪಿಗಳು**

1) ಆಶ್ರಫ್ ಪ್ರಾಯ 34 ವರ್ಷ,
   ಬಿನ್:ಮಹಮ್ಮದ್ ತಲಪಾಡಿ ಮನೆ, ಬಂಟ್ವಾಳ ಮೂಡ ಗ್ರಾಮ,ಬಂಟ್ವಾಳ
2) ಕೊಕ್ಕಡ ಹನೀಫ್ (ಪರಾರಿ)
3) ಇರ್ಫಾನ್ (ಪರಾರಿ)
4) ಪ್ವಧ್ವಿಪಾಲ ರೈ ಯಾನೆ ಪೃಧ್ವಿ (ಪರಾರಿ)

**ವಾಹನದ ಮಾಲೀಕರು**

1) ಶ್ರೀಮತಿ.ಅಮಿತ ಆರ್.ಉಚ್ಚಿಲ್ ಕೋಂ :ರವೀಂದ್ರ ಕೆ ಉಚ್ಚಿಲ್
   ಡೊಬ್ಬ ಕುದ್ರು ಹೌಸ್,ಸೋಮೇಶ್ವರ ಅಂಚೆ, ಉಚ್ಚಿಲ, ಮಂಗಳೂರು
   (ವಾಹನ ಮೋಟಾರ್ ಸೈಕಲ್ ಸಂ: KA-19-U-4452 ಇದರ ಮಾಲಿಕ)
2) ಶ್ರೀ.ಶಾರೀಫ್ ಹಮೀದ್ ಬಿನ್:ಎ.ಖಾದಿರ್,
   ನಿಯರ್ ಮಿಲಾಸ್ ಸ್ಟೋರ್,ಗುರುಪುರ
   ಮಂಗಳೂರು ತಾಲೂಕು
   (ವಾಹನ ಸ್ವರಾಜ್ ಮಜ್ದಾ ಲಾರಿ ಸಂ:KA-19-4237 ಇದರ ಮಾಲಿಕ )
3) ಶ್ರೀ.ಅಬ್ದುಲ್ ಅಜೀಜ್, ಬಿನ್:ಹಸನಬ್ಬ ಹೌಸ್ ನಂ:3 –338,
   ಶಂಕರಿಗುಡ್ಡ ಮೂಡಬೆಟ್ಟು ಗ್ರಾಮ ಶಂಕರಪುರ ಅಂಚೆ
   ಉಡುಪಿ ತಾಲೂಕು ಮತ್ತು ಜಿಲ್ಲೆ.
   (ವಾಹನ ಟಾಟಾ 1109 ಟರ್ಬೋ ಲಾರಿ ಸಂ:
   KA-20-AA-333 ಇದರ ಮಾಲಿಕ)

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:19–8–2009 ರಂದು ರಾತ್ರಿ 10–00 ಗಂಟೆಯಿಂದ ಬಂಟ್ವಾಳ ನಗರ ಪೊಲೀಸ್ ಠಾಣಾ ವೃತ್ತ ನಿರೀಕ್ಷಕರು ಹಾಗೂ ಪೊಲೀಸ್ ಉಪ ನಿರೀಕ್ಷಕರು ಸಿಬ್ಬಂಧಿಗಳೊಂದಿಗೆ ಬಂಟ್ವಾಳ ತಾಲೂಕು ಬಿ.ಸಿ ರೋಡು ಪೊಳಲಿ–ಕೈಕಂಬ ಬಳಿ ವಾಹನಗಳ ತಪಾಸಣೆ ಮಾಡುತ್ತಿರುವಾಗ ದಿ:20–8–2009 ರ ಬೆಳಿಗ್ಗೆ ಜಾವ 1–00 ಗಂಟೆಗೆ ಬಂಟ್ವಾಳ ಮೂಡ ಗ್ರಾಮದ ತಲಪಾಡಿ ಕೆನರಾ ಮಿಲ್ಲಿನ ಹಿಂಬದಿ ದೊಡ್ಡ ಗೂಡ್ಸ್ ಲಾರಿಯಿಂದ ಇತರೆ 2 ಲಾರಿಗಳಿಗೆ ಮದ್ಯಸಾರ ತುಂಬಿದ ಕ್ಯಾನು ಗಳನ್ನು ತುಂಬಿಸಿ ಅಕ್ರಮವಾಗಿ ಸಾಗಾಟ ಮಾಡಲು ನಿಲ್ಲಿಸಿ ಕೊಂಡಿರುತ್ತಾರೆ ಎಂಬ ಖಚಿತ ವರ್ತಮಾನ ವೃತ್ತ ನಿರೀಕ್ಷರಿಗೆ ದೊರೆತ ಮೇರೆಗೆ ವೃತ್ತ ನಿರೀಕ್ಷಕರು ಪಂಚರನ್ನು ಬರಮಾಡಿಕೊಂಡು ಪೊಲೀಸ್ ಉಪ ನಿರೀಕ್ಷಕರು ಮತ್ತು ಇತರೆ ಸಿಬ್ಬಂಧಿಗಳೊಂದಿಗೆ ಮಾಹಿತಿ ದೊರೆತ ಸ್ಥಳಕ್ಕೆ ಹೋಗಿ ನೋಡಲಾಗಿ 2 ಲಾರಿಗಳು ಮತ್ತು ಒಂದು ಸ್ವರಾಜ್ ಮಜ್ದಾ ಟೆಂಪೋ ನಿಂತುಕೊಂಡಿದ್ದು ಅದರ ಎದುರುಗಡೆ ಮುಖ ಪರಿಚಯ ಇರುವ ತಲಪಾಡಿ ವಾಸಿ ಕೊಕ್ಕಡ ಹನೀಫ್, ತಲಪಾಡಿ ವಾಸಿ ಆಶ್ರಫ್ ಹಾಗೂ ಪುತ್ತೂರಿನ ಪ್ರಧ್ವಿಪಾಲ್ ರೈ ಅಲಿಯಾಸ್ ಪೃಧ್ವಿ ಹಾಗೂ ಅವನ ಬಳಿ ಇನ್ನೊಬ್ಬ ನಿಂತಿಕೊಂಡಿದ್ದನ್ನು ಮತ್ತು ಸ್ವರಾಜ್ ಮಜ್ದಾ ಟೆಂಪೊದಲ್ಲಿ ಚಾಲಕ ಇರ್ಫಾನ್ ಎಂಬ ವ್ಯಕ್ತಿ ಕುಳಿತುಕೊಂಡಿರುವುದನ್ನು ಗಮನಿಸಿ ಅವರುಗಳನ್ನು ಸುತ್ತುವರಿಯಲಾಗಿ ಕೊಕ್ಕಡ ಹನೀಪ್ ಪೃಧ್ವಿಪಾಲ ರೈ ಅಲಿಯಾಸ್ ಪೃಧ್ವಿ ಹಾಗೂ ಅವರ ಜೊತೆ

ನಿಂತಿದ್ದ ಲಾರಿ ಚಾಲಕ ಕತ್ತಲಲ್ಲಿ ಓಡಿ ಪರಾರಿಯಾಗಿದ್ದು, ಸ್ವರಾಜ್ ಮಜ್ದಾ ಟೆಂಪೋದಲ್ಲಿ ಕುಳಿತ್ತಿದ್ದ ಚಾಲಕ ಇರ್ಫಾನ್ ಎಂಬಾತನು ಟೆಂಪೋ ಸಮೇತ ಓಡಿಹೋಗಲು ಪ್ರಯತ್ನಿಸುತ್ತಿರುವುದನ್ನು ಕಂಡು ಆತನನ್ನು ನಿಲ್ಲಲು ಸೂಚಿಸಿದಾಗ ಆತನು ಕೂಡಾ ಟೆಂಪೋವನ್ನು ಅಲ್ಲಿಯೇ ಬಿಟ್ಟು ಓಡಿಹೋದನು . ಅಲ್ಲಿಯೇ ನಿಂತಿದ್ದ ಇನ್ನೊಂದು ವಾಹನದ ಚಾಲಕ ಆಶ್ರಫ್ ಎಂಬವನ್ನು ಹಿಡಿದು ನಿಲ್ಲಿಸಿ ಲಾರಿಗಳನ್ನು ತಪಾಸಣೆ ಮಾಡಿದಾಗ 2 ಲಾರಿಗಳಲ್ಲಿ ಹಾಗೂ ಟೆಂಪೋದಲ್ಲಿ 35 ಲೀಟರು ತುಂಬುವಂತಹ ಬಿಳಿ ಬಣ್ಣದ ಪ್ಲಾಸ್ಟಿಕ್ ಕ್ಯಾನುಗಳಲ್ಲಿ ಅಕ್ರಮವಾಗಿ ಶರಾಬು ಹಾಗೂ ಬ್ರಾಂಡಿ ತಯಾರಿಸಲು ಬಳಸುವ ಮದ್ಯಸಾರ ಇರುವುದು ಕಂಡುಬಂದು,ಈ ಬಗ್ಗೆ ಚಾಲಕ ಆಶ್ರಫ್‌ನಲ್ಲಿ ಪೊಲೀಸ್ ನಿರೀಕ್ಷಕರು ವಿಚಾರಿಸಿದಾಗ ತಲಪಾಡಿಯ ಕೊಕ್ಕಡ ಹನೀಫ್ ಮತ್ತು ಪುತ್ತೂರಿನ ಪೃದ್ವಿಪಾಲ ರೈ ಇವರುಗಳು ಸೇರಿಕೊಂಡು ದೊಡ್ಡ ಲಾರಿಯಲ್ಲಿ ಕ್ಯಾನುಗಳಲ್ಲಿ ಸ್ಪಿರಿಟನ್ನು ತರಿಸಿಕೊಂಡಿದ್ದು,ಸದ್ರಿ ಲಾರಿಯಿಂದ ಇತರ ಲಾರಿಗಳಿಗೆ ಸ್ಪಿರಿಟನ್ನು ಪುತ್ತೂರಿಗೆ ಹಾಗೂ ಕಾಸರಗೋಡಿಗೆ ಸಾಗಾಟ ಮಾಡುವುದಾಗಿ, ಸದ್ರಿ ಸ್ಪಿರಿಟನ್ನು ಸಾಗಾಟ ಮಾಡಲು ಯಾವುದೇ ದಾಖಲಾತಿಗಳು ಇಲ್ಲವೆಂದು ತಿಳಿಸಿದನು.ಲಾರಿಗಳ ಸಮೀಪ ನಿಲ್ಲಿಸಲಾಗಿದ್ದ ಮೋಟಾರು ಸೈಕಲಿನ ಬಗ್ಗೆ ಆರೋಪಿತ ಅಶ್ರಫ್‌ನನ್ನು ವಿಚಾರಿಸಿದಾಗ ತಲೆಮರೆಸಿಕೊಂಡಿರುವ ಕೊಕ್ಕಡ ಹನೀಫನು ತಮಗೆ ದಾರಿ ತೋರಿಸಲು ಉಪಯೋಗಿಸುವ ಮೋಟಾರು ಸೈಕಲ್ ಅದಾಗಿದೆ ಎಂದು ತಿಳಿಸಿದನು. ನಂತರ ಪತ್ತೆಯಾದ ಎರಡು ಲಾರಿಗಳು ಮತ್ತು ಒಂದು ಟೆಂಪೊವನ್ನು ಕೂಲಂಕಷವಾಗಿ ಪರಿಶೀಲಿಸಿದಾಗ 1) ಕೆಎ–19–4237 ಸ್ವರಾಜ್ ಮಜ್ದಾ ಗೂಡ್ಸ್ ಟೆಂಪೊ ಇದರ ಬಾಡಿಗೆ ಹೊದಿಸಲಾದ ನೀಲಿ ಟರ್ಪಾಲನ್ನು ಸರಿಸಿ ನೋಡಿದಾಗ ಅದರಲ್ಲಿ 3 5 ಲೀಟರ್ ಸಾಮರ್ಥ್ಯದ ಸ್ಪಿರಿಟ್ ತುಂಬಿಸಿದ ಒಟ್ಟು 88 ಕ್ಯಾನುಗಳು ಪತ್ತೆಯಾಗಿ ಸದರಿ ಪ್ರತಿ ಕ್ಯಾನುಗಳಿಂದ ಸ್ಯಾಂಪಲಿಗಾಗಿ 180 ಎಂ.ಎಲ್.ನ ಬಾಟಲಿಗಳಲ್ಲಿ 88 ಮಾದರಿ ಸ್ಯಾಂಪಲ್‌ಗಳನ್ನು ತೆಗೆದು ಅದಕ್ಕೆ ಎಸ್.ಹೆಚ್.ಓ ಸೀಲು ಮಾಡಿ,ಕ್ರಮಸಂಖ್ಯೆ ನೀಡಿರುತ್ತಾರೆ.

2) ಟಾಟಾ ಗೂಡ್ಸ್ ಲಾರಿ ನಂ.HR-3 8F-4904 ಇದರ ಬಾಡಿ ಭಾಗಕ್ಕೆ ಹೊದಿಸಲಾದ ಟರ್ಪಾಲನ್ನು ಸರಿಸಿ ನೋಡಲಾಗಿ, ಅದರಲ್ಲಿ 35 ಲೀಟರ್ ಸಾಮರ್ಥ್ಯದ ಸ್ಪಿರಿಟ್ ತುಂಬಿಸಿದ ಒಟ್ಟು 132 ಕ್ಯಾನುಗಳು ಪತ್ತೆಯಾಗಿ ಸದರಿ ಪ್ರತಿ ಕ್ಯಾನುಗಳಿಂದ ಸ್ಯಾಂಪಲಿಗಾಗಿ 180 ಎಂ.ಎಲ್.ನ ಬಾಟಲಿಗಳಲ್ಲಿ 132 ಮಾದರಿ ಸ್ಯಾಂಪಲ್‌ಗಳನ್ನು ತೆಗೆದು ಅದಕ್ಕೆ ಎಸ್.ಹೆಚ್.ಓ ಸೀಲು ಮಾಡಿ, ಕ್ರಮಸಂಖ್ಯೆ ನೀಡಿರುತ್ತಾರೆ.

3) ಟಾಟಾ 1109 ಟರ್ಬೋ ಲಾರಿ ಸಂ:ಕೆಎ–20 ಎಎ–333 ಇದರ ಬಾಡಿ ಭಾಗಕ್ಕೆ ಹೊದಿಸಿದ ಟರ್ಪಾಲನ್ನು ಸರಿಸಿ ನೋಡಲಾಗಿ, ಅದರಲ್ಲಿ 35 ಲೀಟರ್ ಸಾಮರ್ಥ್ಯದ ಸ್ಪಿರಿಟ್ ತುಂಬಿಸಿದ ಒಟ್ಟು 175 ಕ್ಯಾನುಗಳು ಪತ್ತೆಯಾಗಿ, ಸದರಿ ಪ್ರತಿ ಕ್ಯಾನುಗಳಿಂದ ಸ್ಯಾಂಪಲಿಗಾಗಿ 180 ಎಂ.ಎಲ್.ನ ಬಾಟಲಿಗಳಲ್ಲಿ 175 ಮಾದರಿ ಸ್ಯಾಂಪಲ್‌ಗಳನ್ನು ತೆಗೆದು ಅದಕ್ಕೆ ಎಸ್.ಹೆಚ್.ಓ ಸೀಲು ಮಾಡಿ, ಕ್ರಮಸಂಖ್ಯೆ ನೀಡಿರುತ್ತಾರೆ. 4) ಆರೋಪಿ ಕೊಕ್ಕಡ ಹನೀಫ್ ಸಾಗಾಟ ಮಾಡುವ ಸಮಯ ದಾರಿ ತೋರಿಸಲು ಉಪಯೋಗಿಸಿರುವ ಮೋಟಾರು ಸೈಕಲ್ ಕೆಎ–19 ಯು–4452 ಇದನ್ನು ಕೂಲಂಕಷವಾಗಿ ಪರಿಶೀಲಿಸಿದಾಗ ಅಳವಡಿಸಲಾದ ನಂಬರ್ ಪ್ಲೇಟಿನಲ್ಲಿ ನಂಬರನ್ನು ಕೆರೆದು,ಅಳಿಸಿ ತೆಗೆದಿರುವಂತೆ ಕಂಡುಬಂದಿದ್ದು, ಚಾಸಿಸ್ ಸಂಖ್ಯೆ ಮತ್ತು ಇಂಜಿನ್ ಸಂಖ್ಯೆ ಸ್ಪಷ್ಟವಾಗಿ ಗೋಚರಿಸುತ್ತಿರಲಿಲ್ಲ.

ಅಕ್ರಮವಾಗಿ ಯಾವುದೇ ರಹದಾರಿಯ ದಾಖಲಾತಿಗಳು ಇಲ್ಲದೇ ಸದ್ರಿ ವಾಹನಗಳಲ್ಲಿ ಮದ್ಯಸಾರವನ್ನು ಸಾಗಾಟ ಮಾಡುವುದು ಕಂಡುಬಂದಿರುವುದರಿಂದ ಇದು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 13 ರಂತೆ ಅಪರಾಧವಾಗಿದ್ದು ಹಾಗೂ 32, 33, 34, 38(ಎ) ಮತ್ತು 43ರ ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ, ನಾಲ್ಕು ವಾಹನಗಳನ್ನು ಮತ್ತು 13,825.000 ಲೀಟರು ಮದ್ಯಸಾರದ ಕ್ಯಾನುಗಳನ್ನು ಜಪ್ತುಪಡಿಸಿಕೊಂಡು, ಸ್ಥಳದಲ್ಲಿಯೇ ಪಂಚರ ಸಮಕ್ಷಮ ಮಹಜರು ತಯಾರಿಸಿ, ಸ್ಥಳದಲ್ಲಿ ಹಾಜರಿದ್ದ ಆರೋಪಿಯಾದ ಆಶ್ರ ಫ್ ಬಿನ್:ಮಹ್ಮಮದ್, ತಲಪಾಡಿ ಮನೆ, ಬಂಟ್ವಾಳ ಮೂಡ ಗ್ರಾಮ, ಬಂಟ್ವಾಳ ತಾಲೂಕು ಮತ್ತು ಪರಾರಿಯಾದ ಕೊಕ್ಕಡ ಹನೀಫ್ , ಪ್ರದ್ವಪಾಲ್ ರೈ ಯಾನೆ ಪೃದ್ವಿ ,ಇರ್ಫಾನ್ ಮತ್ತು HR-3 8F-4904 ಇದರ ಚಾಲಕ ಇವರುಗಳ ವಿರುದ್ಧ ತಕ್ಷೀರು ಸಂ:163 /2009 ದಿ:20–8–2009ರಂದು ಮೊಕದ್ದಮೆಯನ್ನು ದಾಖಲಿಸಿ ಕೊಂಡು, ಪ್ರಕರಣ ಸಂದರ್ಭದಲ್ಲಿ ಸ್ಥಳದಲ್ಲಿ ಇದ್ದ ವ್ಯಕ್ತಿಯನ್ನು ದಸ್ತಗಿರಿ ಮಾಡಿ ಪ್ರಥಮ ಮಾಹಿತಿ ವರದಿ, ಮಹಜರು ಮತ್ತು ಸೊತ್ತುಗಳ ಪಟ್ಟಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿ, ಜಪ್ತು ಪಡಿಸಿಕೊಂಡ ವಾಹನಗಳನ್ನು ಹಾಗೂ ಸೊತ್ತುಗಳನ್ನು ಮುಂದಿನ ತನಿಖೆ ಬಗ್ಗೆ ಈ ಪ್ರಾಧಿಕಾರದ ದಿ:16–9–2009ರ ಆದೇಶದ ಮೇರೆಗೆ ಅಬಕಾರಿ ನಿರೀಕ್ಷಕರು ಬಂಟ್ವಾಳ ವಲಯ ಇವರಿಗೆ ದಿ:8–3 –2010ರಂದು ಹಸ್ತಾಂತರಿಸಿರುತ್ತಾರೆ.

**ಜಪ್ತುಪಡಿಸಿಕೊಳ್ಳಲಾದ ಸೊತ್ತುಗಳು:–**

1) ಸ್ವರಾಜ್ ಮಜ್ದಾ ಟೆಂಪೋ ನಂ: ಕೆಎ–19–4237

2) ಟಾಟಾ ಗೂಡ್ಸ ಲಾರಿ ನಂ:ಹೆಚ್‌ಅರ್–38–ಎಫ್–4904

3) ಟಾಟಾ 1109 ಟರ್ಬೋ ಲಾರಿ ಸಂ: ಕೆಎ–20–ಎಎ–333

4) ಮೋಟಾರ್ ಬೈಕ್ ಸಂ:ಕೆಎ–19–ಯು–4452

5) ತಲಾ 35 ಲೀಟರಿನಂತೆ ಸ್ಪಿರಿಟ್ ತುಂಬಿದ 395 ಕ್ಯಾನುಗಳಲ್ಲಿ ಒಟ್ಟು 13,825.000 ಲೀ ಮದ್ಯಸಾರ

(ಪ್ರತಿ ಕ್ಯಾನುಗಳಿಂದ 180 ಎಂಎಲ್‌ನಂತೆ ಒಟ್ಟು 395 ಬಾಟಲಿಗಳಲ್ಲಿ ಮದ್ಯಸಾರವನ್ನು ರಾಸಾಯನಿಕ ಪರೀಕ್ಷೆಗಾಗಿ ಮಾದರಿ ತೆಗೆಯಲಾಗಿದೆ)

ಜಪ್ತುಪಡಿಸಿಕೊಂಡ ವಾಹನಗಳ ಪೈಕಿ ಸ್ವರಾಜ್ ಮಜ್ದಾ ಟೆಂಪೋ ಕೆಎ–19–4237, ಟಾಟಾ ಟರ್ಬೋ ಲಾರಿ ಕೆಎ–20–ಎಎ–333 ಮತ್ತು ಮೋಟಾರ್ ಸೈಕಲ್ ಕೆಎ–19–ಯು–4452 ಇವುಗಳ ಬಿ ರಿಜಿಸ್ಟರ್ ಎಕ್ಸ್‌ಟ್ರಾಕ್ಟ್ ವರದಿಯನ್ನು ಪ್ರಕರಣ ಪತ್ತೆ ಹಚ್ಚಿದ ಪೊಲೀಸ್ ಅಧಿಕಾರಿ ಗಳೇ ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಛೇರಿಯಿಂದ ಪಡೆದುಕೊಂಡು ಮೊಕದ್ದಮೆಯ ದಾಖಲಾತಿಗಳೊಂದಿಗೆ ಹಸ್ತಾಂತರಿಸಿದ್ದು, ವಿವರ ಈ ಕೆಳಕಂಡಂತಿರುತ್ತದೆ.

1) ಸ್ವರಾಜ್ ಮಜ್ದಾ ಟೆಂಪೋ ನಂ: ಕೆಎ–19–4237– (ಚಾಸೀಸ್ ನಂ:J93 WEL4 GM0025 -ಇಂಜಿನ್ ನಂ:SLC3 J18044) ಇದಕ್ಕೆ ಶ್ರೀ.ಶಾರೀಫ್ ಹಮೀದ್ ಬಿನ್:ಎ.ಖಾದಿರ್, ನಿಯರ್ ಮಿಲಾಸ್ ಸ್ಟೋರ್,ಗುರುಪುರ, ಮಂಗಳೂರು ತಾಲೂಕು ಇವರು ವಾಹನದ ನೊಂದಣಿ ಮಾಲೀಕರಾಗಿರುವುದಾಗಿ ಹಾಗೂ M/s N.B Finace, E Sowcarpet,Channi ಇವರು ದಿ:13–3–2000 ದಿಂದ ಸದ್ರಿ ವಾಹನದ ಹೆಚ್.ಪಿ.ಎ ದಾರರಾಗಿರುವುದಾಗಿ ಕಂಡು ಬಂದಿರುತ್ತದೆ.

2) ಟಾಟಾ 1109 ಟರ್ಬೋ ಲಾರಿ ಸಂ:ಕೆಎ–20–ಎಎ–333–(ಚಾಸೀಸ್ ನಂ: 4163 02 J WZ210427 ಇಂಜಿನ್ ನಂ:497TC85JWZ116783) ಇದಕ್ಕೆ ಶ್ರೀ.ಅಬ್ದುಲ್ ಅಜೀಜ್, ಬಿನ್:ಹಸನಬ್ಬ, ಹೌಸ್ ನಂ:3–338, ಶಂಕರಿಗುಡ್ಡ ಮೂಡಬೆಟ್ಟು ಗ್ರಾಮ, ಶಂಕರಪುರ ಅಂಚೆ, ಉಡುಪಿ ತಾಲೂಕು ಮತ್ತು ಜಿಲ್ಲೆ ಇವರು ದಿ:4–4–2008ರಿಂದ ನೊಂದಾಣಿ ಮಾಲೀಕರಾಗಿರುವುದಾಗಿ ಹಾಗೂ ಮೆ:ನಾರಾಯಣಗುರು, ಅರ್ಬನ್ ಕಾರ್ಪೋರೇಟಿವ್ ಬ್ಯಾಂಕ್ ಲಿಮಿಟೆಡ್, ಉಡುಪಿ ಇವರು ವಾಹನದ ಹೆಚ್.ಪಿ.ಎ ದಾರರಾಗಿರುವುದಾಗಿ ಕಂಡುಬಂದಿರುತ್ತದೆ.

3) ಟಾಟಾ ಗೂಡ್ಸ್ ಲಾರಿ ಸಂ: ಹೆಚ್ಆರ್–38–ಎಫ್–4904 ಇದರ ಬಿ ಎಕ್ಸ್‌ಟ್ರಾಕ್ಟ್ ವರದಿಗಾಗಿ ಪ್ರಕರಣ ಪತ್ತೆ ಹಚ್ಚಿದ ಪೋಲೀಸ್ ಅಧಿಕಾರಿಗಳು ಜಿಲ್ಲಾ ಸಾರಿಗೆ ಅಧಿಕಾರಿಗಳು, ಫರಿದಾಬಾದ್, ಹರಿಯಾಣ ರಾಜ್ಯ ಇವರಿಗೆ ದಿ:8–3 –2010 ರಂದು ಪತ್ರ ಬರೆದಿದ್ದರೂ ಸದ್ರಿಯವರಿಂದ ಯಾವುದೇ ಬಿ ಎಕ್ಸ್‌ಟ್ರಾಕ್ಟ್ ವರದಿ ಬಾರದೇ ಇರುವುದರಿಂದ ಪ್ರಕರಣವನ್ನು ಹಸ್ತಾಂತರ ಪಡೆದುಕೊಂಡ ತನಿಖಾಧಿಕಾರಿಗಳಾದ ಅಬಕಾರಿ ನಿರೀಕ್ಷಕರು,ಬಂಟ್ವಾಳ ವಲಯ ರವರು ಸದ್ರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಮತ್ತೆ ದಿನಾಂಕ:15–4–2010ರಂದು ಪತ್ರ ಬರೆದರೂ ಸದ್ರಿಯವರಿಂದ ಬಿ ಎಕ್ಸ್‌ಟ್ರಾಕ್ಟ್ ವರದಿ ಇದುವರೆಗೂ ಸ್ವೀಕೃತವಾಗಿರುವುದಿಲ್ಲ.

4) ಮೋಟಾರ್ ಬೈಕ್ ಸಂ:ಕೆಎ–19–ಯು–4452 ಇದಕ್ಕೆ ಶ್ರೀಮತಿ.ಅಮಿತ ಆರ್.ಉಚ್ಚಿಲ್ ಕೋಂ : ರವೀಂದ್ರ ಕೆ ಉಚ್ಚಿಲ್, ಡೊಬ್ಬ ಕುದ್ರು ಹೌಸ್, ಸೋಮೇಶ್ವರ ಅಂಚೆ, ಉಚ್ಚಿಲ, ಮಂಗಳೂರು ಇವರು ವಾಹನದ ನೊಂದಾಣಿ ಮಾಲಕಿಯಾಗಿರುವುದಾಗಿ ಕಂಡು ಬಂದಿದ್ದು, ಬಿ ಎಕ್ಸ್‌ಟ್ರಾಕ್ಟ್ ವರದಿಯ ಪ್ರಕಾರ ವಾಹನವು ಮೋಟಾರ್ ಬೈಕ್ ಆಗಿರದೇ ಕೈನೆಟಿಕ್ ನೋವಾ 135–ಸ್ಕೂಟರ್ ಎಂಬುದಾಗಿದ್ದು ಪ್ರಕರಣ ಪತ್ತೆ ಕಾಲದಲ್ಲಿ ಮೋಟಾರು ಸೈಕಲ್‌ಗೆ ನಕಲಿ ನಂಬರ್ ಪ್ಲೇಟು ಅಳವಡಿಸಿ ಅಕ್ರಮವೆಸಗಿರುವುದು ಖಾತ್ರಿಯಾಗಿರುತ್ತದೆ.

ಪ್ರಕರಣದಲ್ಲಿ ಮುಟ್ಟುಗೋಲು ನಡವಳಿ ಪೂರ್ವದಲ್ಲಿ ಪ್ರಾಧಿಕಾರದಿಂದ ಮೇಲ್ಕಾಣಿಸಿದ ವಾಹನ ಕ್ರಮ ಸಂ:1,2 ಮತ್ತು 4ರ ಆರ್.ಸಿ ಮಾಲೀಕರಾದ 1) ಶ್ರೀ.ಶಾರೀಫ್ ಹಮೀದ್ ಬಿನ್:ಎ.ಖಾದಿರ್, ನಿಯರ್ ಮಿಲಾಸ್ ಸ್ಟೋರ್,ಗುರುಪುರ, ಮಂಗಳೂರು ತಾಲೂಕು ಮತ್ತು ಹೆಚ್.ಪಿ.ಎ. ದಾರರಾದ M/s N.B Finace, E Sowcarpet,Channi 2) ಶ್ರೀ.ಅಬ್ದುಲ್ ಅಜೀಜ್, ಬಿನ್:ಹಸನಬ್ಬ, ಹೌಸ್ ನಂ:3–338, ಶಂಕರಿಗುಡ್ಡ, ಮೂಡಬೆಟ್ಟು ಗ್ರಾಮ ಶಂಕರಪುರ ಅಂಚೆ, ಉಡುಪಿ ತಾಲೂಕು ಮತ್ತು ಜಿಲ್ಲೆ ಮತ್ತು ಹೆಚ್.ಪಿ.ಎ ದಾರರಾದ ಮೆ:ನಾರಾಯಣ ಗುರು, ಅರ್ಬನ್ ಕಾರ್ಪೋರೇಟಿವ್ ಬ್ಯಾಂಕ್ ಲಿಮಿಟೆಡ್,ಉಡುಪಿ ಹಾಗೂ 3) ಶ್ರೀಮತಿ.ಅಮಿತ ಆರ್.ಉಚ್ಚಿಲ್, ಕೋಂ : ರವೀಂದ್ರ ಕೆ ಉಚ್ಚಿಲ್, ಡೊಬ್ಬ ಕುದ್ರು ಹೌಸ್, ಸೋಮೇಶ್ವರ ಅಂಚೆ, ಉಚ್ಚಿಲ,ಮಂಗಳೂರು ಇವರುಗಳಿಗೆ ಕರ್ನಾಟಕ ಅಬಕಾರಿ ಕಾಯಿದೆ 1965ರ ಸೆಕ್ಷನ್ 43 (ಬಿ)ಪ್ರಕಾರ ದಿನಾಂಕ:9–6–2010ರಂದು ನೀಡಲಾದ ಕಾರಣ ಕೇಳಿ ನೋಟಿಸು ಶ್ರೀ.ಅಬ್ದುಲ್ ಅಜೀಜ್ ಇವರಿಗೆ ದಿ:10–6–2010ರಂದು ಜ್ಯಾರಿಯಾಗಿದ್ದು, ಸದ್ರಿಯವರಿಂದ ಯಾವುದೇ ಸಮಂಜಾಯಿಷಿ ಈ ಪ್ರಾಧಿಕಾರದಲ್ಲಿ ಸ್ವೀಕೃತವಾಗಿರುವುದಿಲ್ಲ. ಹಾಗೂ ಶ್ರೀ.ಶಾರೀಫ್ ಮತ್ತು ಅವರ ಹೆಚ್.ಪಿ.ಎ ದಾರರಾದ ಮೆ: ಎನ್.ಬಿ.ಫೈನ್ಯಾನ್ಸ್ ಇವರಿಗೆ ನೀಡಲಾದ ಕಾರಣ ಕೇಳಿ ನೋಟಿಸುಗಳು ಜ್ಯಾರಿಯಾಗದೇ ಅಂಚೆ ಷರಾದೊಂದಿಗೆ ವಾಪಸ್ಸು ಬಂದಿರುತ್ತದೆ. ಹಾಗೂ ಶ್ರೀಮತಿ.ಅಮಿತ ಆರ್ ಉಚ್ಚಿಲ್ ಇವರಿಗೆ ನೀಡಲಾದ ಕಾರಣ ಕೇಳಿ ನೊಟೀಸು ದಿ:11–6–2010ರಂದು ಜ್ಯಾರಿಯಾಗಿದ್ದು, ಸದ್ರಿಯವರು ದಿ: 18–6–2010ರಂದು ಪ್ರಾಧಿಕಾರಕ್ಕೆ ಉತ್ತರಿಸಿ ತನ್ನ ಒಡೆತನದಲ್ಲಿರುವ ಕೈನೆಟಿಕ್ ನೋವಾ ಸ್ಕೂಟರ್ ನೊಂದಣಿ ಸಂ: KA-19-U-4452 ಯಾವುದೇ ಅಕ್ರಮದಲ್ಲಿ ಜಪ್ತಿಯಾಗದೇ ತನ್ನ ವಶದಲ್ಲಿಯೇ ಇದ್ದು ಪ್ರಕರಣಕ್ಕೆ ಸಂಬಂಧಿಸಿದಂತೆ ಜಪ್ತಿಯಾದ ಮೋಟಾರು ಸೈಕಲ್ ಸಂ: KA-19-U-4452 ಇದಕ್ಕೂ ತನ್ನಗೂ ಯಾವುದೇ ಸಂಬಂಧವಿಲ್ಲವೆಂದು ತಿಳಿಸಿರುತ್ತಾರೆ. ಮತ್ತು ವಾಹನ ಸಂ: KA-20-AA-333 ಟರ್ಬೋ ಲಾರಿ ಇದರ ಹೆಚ್,.ಪಿ.ಎ ದಾರರಾದ ಮೆ:ನಾರಾಯಣಗುರು, ಅರ್ಬನ್ ಕಾರ್ಪೋರೇಟಿವ್ ಬ್ಯಾಂಕ್ ಲಿಮಿಟೆಡ್,ಉಡುಪಿ ಇವರು ಕಾರಣ ಕೇಳಿ ನೋಟಿಸಿಗೆ ಉತ್ತರಿಸುತ್ತಾ ವಾಹನದ ಮಾಲೀಕರಾದ ಶ್ರೀ.ಅಬ್ದುಲ್ ಅಜೀಜ್ ಇವರಿಗೆ ತಮ್ಮ ಸಂಸ್ಥೆಯಿಂದ ಹಣಕಾಸಿನ ವ್ಯವಸ್ಥೆ ಮಾಡಲಾಗಿದ್ದು, ಸದ್ರಿಯವರಲ್ಲಿ ಹಣಕಾಸಿನ ಬಗ್ಗೆ ಮಾತ್ರ ವ್ಯವಹಾರ ಇದ್ದು, ಸದ್ರಿ ವಾಹನವನ್ನು ಅಕ್ರಮಕ್ಕೆ ಬಳಸಿರುವ ಬಗ್ಗೆ ತಮ್ಮ ಜವಾಬ್ದಾರಿಕೆ ಇರುವುದಿಲ್ಲವೆಂದು ತಿಳಿಸಿ ವಾಹನದ ಬಗ್ಗೆ ಕೈಗೊಳ್ಳುವ ಕಾನೂನು ಕ್ರಮಕ್ಕೆ ತಾವು ಬದ್ದರಾಗಿಲ್ಲವೆಂದು ಸ್ಪಷ್ಟಪಡಿಸಿರುತ್ತಾರೆ.

ಪ್ರಕರಣ ತನಿಖಾಧಿಕಾರಿಗಳು ಜಪ್ತುಪಡಿಸಿಕೊಂಡ ಮದ್ಯಸಾರದ ಮಾದರಿಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿ, ಮುಖ್ಯ ರಸಾಯನ ತಜ್ಞ ಮತ್ತು ಕರ್ನಾಟಕ ಸರ್ಕಾರದ ಪದನಿಮಿತ್ತ ಸಹಾಯಕ ರಾಸಾಯನ ಪರೀಕ್ಷಕರು , ಕೇಂದ್ರ ರಾಸಾಯನಿಕ ಪ್ರಯೋಗಾಲಯ, ಅಬಕಾರಿ ಇಲಾಖೆ, ಬೆಂಗಳೂರು ವಲಯ ಇವರು ನೀಡಿದ ವಿಶ್ಲೇಷಣಾ ವರದಿ ಸಂ:ಸಿಸಿಎಲ್–1982/2010 ದಿ: 19–4–2010ರಲ್ಲಿ ಮಾದರಿಗಳಲ್ಲಿ ಮದ್ಯಸಾರದ ಪ್ರಮಾಣ 65.3 ಡಿಗ್ರಿಯಿಂದ 66.4 ಡಿಗ್ರಿಯವರೆಗೆ ಇರುವುದಾಗಿ ಹಾಗೂ ಮಾದರಿಗಳಲ್ಲಿ ಈಥೈಲ್ ಅಲ್ಕೋಹಾಲ್ ಕಂಡುಬಂದಿದ್ದು,ಅವು ಮಾನವನ ಸೇವನೆಗೆ ಬಳಸಬಹುದಾದ ಮದ್ಯವನ್ನು ತಯಾರಿಸಲು ಯೋಗ್ಯ ವಾಗಿರುತ್ತದೆ ಎಂದು ದೃಢೀಕರಣ ಪತ್ರ ನೀಡಿರುತ್ತಾರೆ. ಸದ್ರಿ ವಿಶ್ಲೇಷಣಾ ವರದಿ ಮತ್ತು ಪ್ರಕರಣದ ಎಲ್ಲಾ ದಾಖಲಾತಿಗಳನ್ನು ಲಗತ್ತಿಸಿ,ಪ್ರಕರಣದ ತನಿಖಾಧಿಕಾರಿಗಳಾದ ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯರವರ ತನಿಖಾ ವರದಿ ಸಂ: ಅಇ/ಬ.ವ/ ಆರ್‌ಸಿಆರ್/13 /2009–10 ದಿ:3 –5–2010ರಲ್ಲಿ, ಪ್ರಕರಣದಲ್ಲಿ ಜಪ್ತುಪಡಿಸಿಕೊಂಡ ಮದ್ಯಸಾರವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಲು ಶಿಫಾರಸ್ಸು ಮಾಡಿರುತ್ತಾರೆ. ಅದರಂತೆ ಈ ಪ್ರಾಧಿಕಾರದ ಆದೇಶ ಸಂ: ಎಸ್‌ಡಿಕೆ/ 57/ ಡಿಟಿಸಿಆರ್/2009–10, ದಿ:25–5–2010ರಲ್ಲಿ ತಕ್ಷೀರಿನಲ್ಲಿ ವಶಪಡಿಸಿ ಕೊಂಡ ಸೊತ್ತುಗಳ ಪೈಕಿ ವಾಹನಗಳ ಮುಟ್ಟುಗೋಲು ಪ್ರಕ್ರಿಯೆಯನ್ನು ಕಾಯ್ದಿರಿಸಿ, ಉಳಿದ 395 ಕ್ಯಾನುಗಳಲ್ಲಿದ್ದ ಒಟ್ಟು 13 ,825.000 ಲೀ ಮದ್ಯಸಾರ (ಮಾದರಿಗಳನ್ನು ಹೊರತುಪಡಿಸಿ)ವನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43 ಸಿ ರಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು

ಹಾಕಿಕೊಂಡು, ಅಬಕಾರಿ ಉಪ ಅಧೀಕ್ಷಕರು, ಮಂಗಳೂರು ಉಪ ವಿಭಾಗ–1 ಇವರ ಸಮಕ್ಷಮ ನಾಶ ಪಡಿಸಲು ಹಾಗೂ ಖಾಲಿ ಪ್ಲಾಸ್ಟಿಕ್ ಕ್ಯಾನುಗಳನ್ನು ವಿಲೇವಾರಿಗೊಳಿಸಲು ಆದೇಶಿಸಲಾಗಿರುತ್ತದೆ. ಅದರಂತೆ ಮದ್ಯಸಾರವನ್ನು ದಿ:16–6–2010ರಂದು ನಾಶಗೊಳಿಸಿ ಖಾಲಿ ಪ್ಲಾಸ್ಟಿಕ್ ಕ್ಯಾನುಗಳನ್ನು ವಿಲೇವಾರಿಗೊಳಿಸಿದ ವರದಿ ಪ್ರಾಧಿಕಾರದಲ್ಲಿ ದಿ:25–6–2010ರಂದು ಸ್ವೀಕೃತವಾಗಿರುತ್ತದೆ.

ಜಪ್ತುಪಡಿಸಿದ ವಾಹನಗಳ ಪೈಕಿ ಕ್ರ.ಸಂ:1 ರ ವಾಹನ ಕೆಎ–19–4237 ರ ಮಾಲೀಕರಿಗೆ ಈ ಪ್ರಾಧಿಕಾರದಿಮದ ನೀಡಿದ ಕಾರಣ ಕೇಳಿ ನೋಟಿಸು ಜಾರಿಯಾಗದೇ ಅಂಚೆ ಷರಾದೊಂದಿಗೆ ವಾಪಾಸು ಬಂದಿರುವುದು ಮತ್ತು ಕ್ರ.ಸಂ.2ರ ವಾಹನ ಟಾಟಾ 1109 ಟರ್ಬೋಲಾರಿ ಸಂ:ಕೆಎ–20ಎಎ–333 ಇದರ ಹಣಕಾಸು ಸಂಸ್ಥೆಯವರು ನೀಡಿರುವ ಉತ್ತರದಿಂದ ಸದ್ರಿ ವಾಹನವನ್ನು ತಮ್ಮ ಸುಪರ್ಧಿಗೆ ಪಡೆದುಕೊಳ್ಳುವಲ್ಲಿ ಪ್ರಯತ್ನ ಪಡೆಯದೇ ಇರುವುದು ಹಾಗೂ ಕ್ರ.ಸಂ 3 ರ ವಾಹನ ಟಾಟಾ ಗೂಡ್ಸ್ ಲಾರಿ ಸಂ:ಹೆಚ್‌ಆರ್–38 ಎಫ್–4904 ಇದರ ಬಿ ರಿಜಿಸ್ಟಾರ್ ಎಕ್ಸ್‌ಟ್ರಾಕ್ಟ್ ವರದಿಯನ್ನು ಪಡೆಯಲು ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳನ್ನು ಪ್ರಕರಣ ಪತ್ತೆ ಹಚ್ಚಿದ ಅದಿಕಾರಿಗಳು ಮತ್ತು ತನಿಖಾದಿಕಾರಿಗಳು ಪತ್ರ ಮುಖೇನಾ ಪ್ರಯತ್ನ ಪಟ್ಟರೂ ಸದ್ರಿಯವರಿಂದ ಯಾವುದೇ ಬಿ ರಿಜಿಸ್ಟಾರ್ ಎಕ್ಸ್‌ಟ್ರಾಕ್ಟ್ ವರದಿ ಸ್ವೀಕೃತವಾಗದೇ ಇರುವುದರಿಂದ ಮತ್ತು ಕ್ರ.ಸಂ:4ರ ವಾಹನ ಮೋಟಾರು ಬೈಕು ಸಂ:ಕೆಎ–19ಯು–4452 ಇದಕ್ಕೆ ಪ್ರಕರಣ ಸಂದರ್ಭದಲ್ಲಿ ಉದ್ದೇಶಪೂರ್ವಕವಾಗಿ ನಕಲಿ ನಂಬರ್ ಪ್ಲೇಟನ್ನು ಆಳವಡಿಸಿರುವ ಕಾರಣ ಪ್ರಕರಣದಲ್ಲಿ ಜಪ್ತುಪಡಿಸಿಕೊಂಡ ಮೇಲಿನ ಎಲ್ಲಾ ವಾಹನಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಪ್ರಾಧಿಕಾರವು ಮನಗಂಡಿರುತ್ತದೆ.

ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು 11 ತಿಂಗಳು ಅವಧಿ ಕಳೆದಿದ್ದರೂ ವಾಹನದ ಮಾಲೀಕರಾಗಲೀ ಹಾಗೂ ಮಾಲೀಕರ ಪರ ವಾರಸ್ಸುದಾರರಾಗಲೀ ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸ್ಯಾಕ್ಷಾಧಾರಗಳನ್ನು ಸಾಬೀತುಪಡಿಸಲು ಮುಂದೆ ಬಂದಿರುವುದಿಲ್ಲ.

ಮೇಲಿನ ವಿದ್ಯಾಮಾನಗಳ ಸಂದರ್ಭದಲ್ಲಿ ವಾಹನಗಳ ಮುಟ್ಟುಗೋಲು ನಡವಳಿ ವಿಚಾರಣೆಯನ್ನು ಪ್ರಾರಂಬಿಸಿ ಅಭಿಯೋಗದ ಪರ ಫಿರ್ಯಾದುದಾರರು, ಮಹಜರು ಸಾಕ್ಷಿದಾರರು ಹಾಗೂ ತನಿಖೆ ಕೈಗೊಂಡ ಬಗ್ಗೆ ಒಟ್ಟು ನಾಲ್ಕು ಸಾಕ್ಷಿದಾರರನ್ನು ವಿಚಾರಣೆಗೆ ಒಳಪಡಿಸಿ ಸಾಕ್ಷಿದಾರರ ಹೇಳಿಕೆಗಳನ್ನು ಪಡೆಯಲಾಗಿರುತ್ತದೆ. ಪ್ರತಿರಕ್ಷಾ ಸಾಕ್ಷಿಗಳು ಹಾಜರಾಗದೇ ಇದ್ದುದರಿಂದ ಪ್ರತಿರಕ್ಷಾ ಸಾಕ್ಷಿಗಳ ಹೇಳಿಕೆಯನ್ನು ಪಡೆಯಲಾಗಿರುವುದಿಲ್ಲ

ಈ ಪ್ರಕರಣದಲ್ಲಿ ಸರ್ಕಾರದ ಅಭಿಯೋಜನ ಪರ ಸಲ್ಲಿಸಿರುವ ಸಾಕ್ಷಾಧ್ಯಾರಗಳಿಂದ ಈ ಕೆಳಗಿನ ವಿವಾಧಾಂಶಗಳನ್ನು ತೀರ್ಮಾನಿಸುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತದೆ.

1) ದಿನಾಂಕ:20.08.2009ರಂದು 1) ಸ್ವರಾಜ್ ಮಜ್ದಾ ಟೆಂಪೋ ನಂ: ಕೆ ಎ–19–4237 (2) ಟಾಟಾ ಗೂಡ್ಸ ಲಾರಿ ನಂ:ಹೆಚ್.ಆರ್–38–ಎಫ್–4904 (3) ಟಾಟಾ 1109 ಟರ್ಬೋ ಲಾರಿ ಸಂ: ಕೆಎ–20–ಎಎ–333 ಮತ್ತು (4) ಮೋಟಾರ್ ಬೈಕ್ ಸಂ:ಕೆಎ–19–ಯು–4452 ಇದರಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೆ 13,825.000 ಲೀಟರು ಮದ್ಯಸಾರವನ್ನು ಮದ್ಯಸಾರವನ್ನು ಸಾಗಾಣಿಕೆ ಮಾಡಲು ಉಪಯೋಗಿಸಲಾಗಿದೆಯೇ?

2) ವಶಪಡಿಸಿಕೊಂಡಿರುವ ವಾಹನಗಳ ಮಾಲೀಕರು ತಾನೆಂದು, ತನಗೆ ತಿಳಿಯದೇ ಅಕ್ರಮ ಮದ್ಯಸಾರ ಸಾಗಾಣಿಕೆಗೆ ವಾಹನಗಳನ್ನು ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ವಾಹನಗಳ ಮಾಲೀಕರು ಸಾಬೀತುಪಡಿಸಿದ್ದಾರೆಯೇ?

3) ಜಪ್ತು ಪಡಿಸಲಾಗಿರುವ ವಾಹನಗಳನ್ನು ಕರ್ನಾಟಕ ಅಬಕಾರಿ ಕಾಯಿದೆ 1965 ಕಲಂ 43ಎ ಯಡಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಒಂದನೇ ಅಂಶವನ್ನು ಗುಣತ್ಮಾಕವಾಗಿ,ಎರಡನೇ ಅಂಶವನ್ನು ನಕರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸ–1:–**

ಶ್ರೀ.ವಿವೇಕಾನಂದ, ಪೊಲೀಸ್ ನಿರೀಕ್ಷಕರು, ಬಂಟ್ವಾಳ ನಗರ ಪೊಲೀಸ್ ಠಾಣೆ ಇವರು ಪ್ರಕರಣದ ಫಿರ್ಯಾದುದಾರರಾಗಿದ್ದು ಇವರು ದಿನಾಂಕ:27–7–2010ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ. ತಾನು 2008ನೇ ಇಸವಿ ನವೆಂಬರ್ ತಿಂಗಳಿಂದ ಇಲ್ಲಿಯವರೆಗೆ ಬಂಟ್ವಾಳ ನಗರ ಪೊ.ಠಾಣೆಯಲ್ಲಿ ಪೊಲೀಸ್ ಉಪ ನಿರೀಕ್ಷಕನಾಗಿ ಕರ್ತವ್ಯ ನಿರ್ವಹಿಸುತ್ತಿದ್ದೇನೆ. ದಿನಾಂಕ:19–8–2009ರಂದು ತಮ್ಮ ವೃತ್ತ ನಿರೀಕ್ಷಕರಾದ ಶ್ರೀ.ನಂಜುಂಡೇ ಗೌಡ ಮತ್ತು ಪೊಲೀಸ್ ಸಹಾಯಕ ನಿರೀಕ್ಷರಾದ ಶ್ರೀ.ಶಾಂತಪ್ಪ ಗೌಡ, ಪಿ.ಸಿ 1957 ಜಯಕುಮಾರ್, ಪಿ.ಸಿ 1012 ಕುಶಾಲಪ್ಪ ಗೌಡ, ಪಿ.ಸಿ916 ಸೀತರಾಮ, ಪಿ.ಸಿ3 22 ತಸ್ಲೀಮ್ ಅರೀಫ್, ಪಿ.ಸಿ 608 ಶೈಲೆಂದ್ರ , ಪಿ.ಸಿ 113 ಕೆ.ಭಟಪ್ಪ ರೈ, ಪಿ.ಸಿ 301 ಎಂ ಎ ಪುಣಚ್ಚ ಇವರೊಂದಿಗೆ ಬಂಟ್ವಾಳ ತಾಲೂಕು ಬಿ.ಸಿ ರೋಡು ಪೊಳಲಿ –ಕೈಕಂಬ ಬಳಿ ವಾಹನಗಳ ತಪಾಸಣೆ ಪ್ರಯುಕ್ತ ರಾತ್ರಿ 10–00 ಗಂಟೆಗೆ ವಾಹನಗಳ ತಪಾಸಣೆ ಮಾಡುತ್ತಿರುವಾಗ ದಿ:20–8–2009 ರಂದು ಬೆಳಿಗ್ಗೆ ಜಾವ 1–00 ಗಂಟೆಗೆ ಬಂಟ್ವಾಳ ಮೂಡ ಗ್ರಾಮದ ತಲಪಾಡಿ ಕೆನರಾ ಮಿಲ್ಲಿನ ಹಿಂಬದಿ ದೊಡ್ಡ ಗೂಡ್ಸ್ ಲಾರಿಯಿಂದ ಇತರೆ 2 ಲಾರಿಗಳಿಗೆ ಸ್ಪಿರಿಟ್ ಕ್ಯಾನುಗಳನ್ನು ತುಂಬಿಸಿ ಅಕ್ರಮವಾಗಿ ಸಾಗಾಟ ಮಾಡಲು ನಿಲ್ಲಿಸಿ ಕೊಂಡಿರುತ್ತಾರೆ ಎಂಬ ಖಚಿತ ವರ್ತಮಾನ ವೃತ್ತ ನಿರೀಕ್ಷರಿಗೆ ದೊರೆತ ಮೇರೆಗೆ ವೃತ್ತ ನಿರೀಕ್ಷಕರು ಪಂಚರನ್ನು ಬರಮಾಡಿಕೊಂಡು ತಾನು ಮತ್ತು ಇತರೆ ಸಿಬ್ಬಂಧಿ, ವೃತ್ತ ನಿರೀಕ್ಷಕರು ಎಲ್ಲರೂ ಸ್ಥಳಕ್ಕೆ ಹೋಗಿ ನೋಡಲಾಗಿ 2 ಲಾರಿಗಳನ್ನು ಮತ್ತು ಒಂದು ಸ್ವರಾಜ್ ಮಜ್ದಾ ಟೆಂಪೋ ನಿಂತುಕೊಂಡಿದ್ದು ಅದರ ಎದುರುಗಡೆ ತಮಗೆ ಮುಖ ಪರಿಚಯ ಇರುವ ತಲಪಾಡಿ ವಾಸಿ ಕೊಕ್ಕಡ ಹನೀಫ್ ಮತ್ತು ತಲಪಾಡಿ ವಾಸಿ ಆಶ್ರಫ್ ಹಾಗೂ ಪುತ್ತೂರಿನ ಪ್ರಧ್ವಿಪಾಲ್ ರೈ ಯಾನೆ ಅಲಿಯಾಸ್ ಪೃಧ್ವಿ ಹಾಗೂ ಅವನ ಬಳಿ ಇನ್ನೊಬ್ಬ ನಿಂತಿಕೊಂಡಿದ್ದು ಮತ್ತು ಸ್ವರಾಜ್ ಮಜ್ದಾ ಟೆಂಪೊದಲ್ಲಿ ಚಾಲಕ ಇರ್ಫಾನ್ ಕುಳಿತುಕೊಂಡಿರುವುದನ್ನು ನೋಡಿದೆನು. ತಾವುಗಳು ಸುತ್ತುವರಿದ್ದು ಸಮೀಪಿಸುತ್ತಿರುವುದನ್ನು ನೋಡಿ ಕೊಕ್ಕಡ ಹನೀಫ್ ,ಪೃಧ್ವಿಪಾಲ ರೈ ಅಲಿಯಾಸ್ ಪೃಧ್ವಿ ಹಾಗೂ ಅವರ ಜೊತೆ ನಿಂತಿದ್ದ ಲಾರಿ ಚಾಲಕ ಕತ್ತಲಲ್ಲಿ ಓಡಿಹೋದರು. ಸ್ವರಾಜ್ ಮಜ್ದಾ ಟೆಂಪೋದಲ್ಲಿ ಕುಳಿತ್ತಿದ್ದ ಚಾಲಕ ಇರ್ಫಾನ ನ್ನು ಟೆಂಪೋ ಸಮೇತ ಓಡಿ ಹೋಗಲು ವಾಹನ ಸ್ಟಾಟ್ ಮಾಡಿ ಪ್ರಯತ್ನಿಸುತ್ತಿರುವುದನ್ನು ಕಂಡು

ಕೈಯಲ್ಲಿದ್ದ ಲಾಠಿಯನ್ನು ಹಿಡಿದು ನಿಲ್ಲಿಸಲು ಸೂಚಿಸಿದೆವು. ಚಾಲಕನು ಟೆಂಪೋವನ್ನು ಅಲ್ಲಿಯೇ ಬಿಟ್ಟು ಓಡಿಹೊದನು . ಅಲ್ಲಿಯೇ ನಿಂತಿದ್ದ ಚಾಲಕ ಆಶ್ರಫ್ ಎಂಬವನ್ನು ಹಿಡಿದು ನಿಲ್ಲಿಸಿ ವಶಕ್ಕೆ ತೆಗೆದುಕೊಂಡು ಲಾರಿಗಳನ್ನು ತಪಾಸಣೆ ಮಾಡಿದಾಗ ಲಾರಿಗಳಲ್ಲಿ ಹಾಗೂ ಟೆಂಪೋವಿನಲ್ಲಿ 35 ಲೀಟರು ತುಂಬುವಂತಹ ಬಿಳಿ ಬಣ್ಣದ ಪ್ಲಾಸ್ಟಿಕ್ ಕ್ಯಾನುಗಳಲ್ಲಿ ಅಕ್ರಮವಾಗಿ ಶರಾಬು ಹಾಗೂ ಬ್ರಾಂಡಿ ತಯಾರಿಸಲು ಅಕ್ರಮವಾಗಿ ಸಾಗಾಟ ಮಾಡಲು ತುಂಬಿಸಿದ್ದ ರೆಕ್ಟಿಫೆಡ್ ಸ್ಪಿರಿಟ್ ಇರುವುದು ಕಂಡುಬಂತು. ಈ ಬಗ್ಗೆ ಚಾಲಕ ಆಶ್ರಫ್ ನಲ್ಲಿ ತಮ್ಮ ಪೊಲೀಸ್ ನಿರೀಕ್ಷಕರು ವಿಚಾರಿಸಿದಾಗ ತಲಪಾಡಿಯ ಕೊಕ್ಕಡ ಹನೀಪ್ ಮತ್ತು ಪುತ್ತೂರಿನ ಪೃಧ್ವಿಪಾಲ ರೈ ಇವರು ಸೇರಿಕೊಂಡು ದೊಡ್ಡ ಲಾರಿಯಲ್ಲಿ ಪ್ಲಾಸ್ಟಿಕ್ ಕ್ಯಾನುಗಳಲ್ಲಿ ಸ್ಪಿರಿಟನ್ನು ತರಿಸಿಕೊಂಡಿದ್ದು,ಸದ್ರಿ ಲಾರಿಯಿಂದ ಇತರ ಲಾರಿಗಳಿಗೆ ಸದ್ರಿ ಸ್ಪಿರಿಟನ್ನು ಪುತ್ತೂರಿಗೆ ಹಾಗೂ ಕೇರಳದ ಕಾಸರಗೋಡಿಗೆ ಸಾಗಾಟ ಮಾಡುವುದಾಗಿ,ಸದ್ರಿ ಸ್ಪಿರಿಟನ್ನು ಸಾಗಾಟ ಮಾಡಲು ಯಾವುದೇ ದಾಖಲಾತಿಗಳು ಇಲ್ಲವೆಂದು ತಿಳಿಸಿದರು. ಆರೋಪಿಗಳು ಅಕ್ರಮವಾಗಿ ಯಾವುದೇ ದಾಖಲಾತಿಗಳು ಇಲ್ಲದೇ ರೆಕ್ಟಿಫೈಡ್ ಸ್ಪಿರಿಟನ್ನು ಸಾಗಾಟ ಮಾಡುವುದು ಕಂಡು ಬಂದಿರುವುದರಿಂದ ಚಾಲಕನನ್ನು ಸ್ಥಳದಲ್ಲಿಯೇ ದಸ್ತಗಿರಿ ಮಾಡಿ ಸಾಗಾಟಕ್ಕೆ ಉಪಯೋಗಿಸಿದ್ದ ಸ್ವರಾಜ್ ಮಜ್ದಾ ಟೆಂಪೋ ನಂ: ಕೆಎ–19–4237 ಟಾಟಾ ಗೂಡ್ಸ ಲಾರಿ ನಂ:ಹೆಚ್.ಆರ್–38–ಎಫ್–4904 ಮತ್ತು ಟಾಟಾ 1109 ಟರ್ಬೋ ಲಾರಿ ಸಂ: ಕೆಎ–20–ಎಎ–333 ನ್ನು ಹಾಗೂ ಲಾರಿಗಳ ಸಮೀಪ ನಿಲ್ಲಿಸಿಕೊಂಡಿದ್ದ ಮೋಟಾರ್ ಬೈಕ್ ಸಂ:ಕೆಎ–19–ಯು–4452 ನ್ನು ಹಾಗೂ 2 ಲಾರಿ ಮತ್ತು 1 ಟೆಂಪೊದಲ್ಲಿ ಸಾಗಾಟ ಮಾಡಲು ತುಂಬಿಸಿಟ್ಟಿದ್ದ 35 ಲೀಟರು ಸ್ಪಿರಿಟ್ ತುಂಬಿದ್ದ ಒಟ್ಟು ಪ್ಲಾಸ್ಟಿಕ್ 395 ಕ್ಯಾನುಗಳಿದ್ದು,ಅವುಗಳನ್ನು ಮಹಜರು ಮುಖೇನಾ ಸ್ವಾಧೀನ ಪಡಿಸಿಕೊಂಡು ಸ್ಥಳದಲ್ಲಿಯೇ ತಯಾರಿಸಲಾದ ಮಹಜರನ್ನು ಶ್ರೀ.ಕುಶಾಲಪ್ಪ ಗೌಡ,ಪಿ.ಸಿ ಇವರ ಹಸ್ತದಲ್ಲಿ ತಯಾರಿಸಿ ,ಸದ್ರಿ ಮಹಜರಿಗೆ ತಾನು ಸಹಿ ಮಾಡಿರುತ್ತೇನೆ. ಮಹಜರನ್ನು ಈಗ ನೋಡಿ ಅದನ್ನು ನಿಶಾನೆಪಿ–1 ಮತ್ತು ಅದರ ಮೇಲಿನ ತನ್ನ ಸಹಿಯನ್ನು ನಿಶಾನೆ ಪಿ–1 ಎ ಎಂದು ಗುರುತಿ ಸಲಾಯಿತು. ಸ್ವಾಧೀನ ಪಡಿಸಿದ ವಾಹನಗಳ ಒಟ್ಟು ಮೌಲ್ಯ 14,65,000/– ಹಾಗೂ ಸ್ಪಿರಿಟಿನ ಅಂದಾಜು ಮೌಲ್ಯ 9,67,750/– ರೂ ಆಗಬಹುದು.

ಮುಂದಕ್ಕೆ ಜಪ್ತುಪಡಿಸಿಕೊಂಡ ಸೊತ್ತುಗಳನ್ನು ಆರೋಪಿಗಳ ಸಮೇತ ಠಾಣೆಗೆ ತಂದು ಠಾಣಾ ಪ್ರಭಾರದಲ್ಲಿದ್ದ ಎ.ಎಸ್.ಐ ಶ್ರೀ.ಕೆ.ಆನಂದ್ ಇವರು ಪ್ರಥಮ ಮಾಹಿತಿ ಸಂ: 163/2009ರಂತೆ ಕರ್ನಾಟಕ ಅಬಕಾರಿ ಕಾಯಿದೆ ಕಲಂ 11, 13, 32, 33, 34, 38ಎ ಮತ್ತು 43 ರ ಪ್ರಕಾರ ಪ್ರಕರಣವನ್ನು ದಾಖಲಿಸಿ ಕೊಂಡಿರುತ್ತಾರೆ.

ನಂತರ ವಶಪಡಿಸಿಕೊಂಡ ಸೊತ್ತುಗಳ ತನಿಖೆಯನ್ನು ಮುಂದುವರಿಸಿ ಠಾಣಾ ಪಿ.ಎಫ್ ನಂ: 87/2009 ದಿ:20–8–2009ರಲ್ಲಿ ನಮೂದಿಸಿ ಸೊತ್ತುಗಳ ಪೈಕಿ ಮಾದರಿಗಾಗಿ ತೆಗೆದಿರಿಸಿದ 395 ಬಾಟಲಿಗಳನ್ನು ರಾಸಾಯನಿಕ ತಜ್ಞರ ವಿಶ್ಲೇಷಣೆಗೆ ಕಳುಹಿಸಲು ಹಾಗೂ ಉಳಿದ ಸೊತ್ತುಗಳನ್ನು ಅಬಕಾರಿ ಕಾಯಿದೆಯಡಿ ಮುಂದಿನ ಕ್ರಮ ಜರುಗಿಸಲು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ಮಾನ್ಯ ನ್ಯಾಯಾಲಯಕ್ಕೆ ನಿವೇದಿಸಿಕೊಂಡಿರುತ್ತೇನೆ. ಆರೋಪಿತನ್ನು ನ್ಯಾಯಾಲಯ ಬಂಧನಕ್ಕೆ ಒಳಪಡಿಸಲು ಮಾನ್ಯ ನ್ಯಾಯಾಲಯಕ್ಕೆ ಸಿಬ್ಬಂಧಿಗಳ ಮುಖೇನಾ ಹಾಜರುಪಡಿಸಲಾಯಿತು. ಮಾದರಿ ತೆಗೆಯಲಾದ 395 ಕ್ವಾಟರ್ ಬಾಟಲಿಗಳಲ್ಲಿದ್ದ ಮದ್ಯಸಾರವನ್ನು ರಾಸಾಯನಿಕ ವಿಶ್ಲೇಷಣೆಗಾಗಿ ಎಫ್.ಎಸ್.ಎಲ್, ಮಂಗಳೂರು ಇಲ್ಲಿಗೆ ಕಳುಹಿಸಿಕೊಡಲಾಯಿತು. ಜಪ್ತು ಪಡಿಸಿಕೊಂಡ ಸೊತ್ತುಗಳನ್ನು (ಮಾದರಿ ಬಾಟಲಿಗಳನ್ನು ಹೊರತುಪಡಿಸಿ) ಕಾರ್ಯ ವ್ಯಾಪ್ತಿಯ ಅಬಕಾರಿ ಅಧಿಕಾರಿಗಳಿಗೆ ಹಸ್ತಾಂತರಿಸುವರೇ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ ಜಿಲ್ಲೆ ಮಂಗಳೂರು ಇವರಿಗೆ ದಿ:5–9–2009ರಂದು ಆದೇಶಕ್ಕಾಗಿ ಪತ್ರ ಬರೆದಿರುತ್ತೇನೆ. ಸದ್ರಿ ಪತ್ರವನ್ನು ಈಗ ನೋಡಿ ಅದನ್ನು ನಿಶಾನೆ ಪಿ–2 ಎಂದು ಅದರ ಮೇಲಿನ ತನ್ನ ಸಹಿಯನ್ನು ನಿಶಾನೆ ಪಿ–2 ಎ ಎಂದು ಗುರುತಿಸಿರುತ್ತೇನೆ ಎಂದು ಸಾಕ್ಷಿ ನುಡಿದಿರುತ್ತಾರೆ.

**ಪಾಟೀ ಸವಾಲು:** ಜಪ್ತು ಪಡಿಸಿಕೊಂಡ ವಾಹನಗಳ ಮಾಲೀಕರಾಗಲೀ ಅಥವಾ ಮಾಲೀಕರ ಪರ ಪ್ರತಿನಿಧಿಗಳಾಗಲೀ ಈ ಪ್ರಾಧಿಕಾರದ ಮುಂದೆ ಹಾಜರಾಗದೇ ಇರುವುದರಿಂದ ಪ್ರಕರಣದಲ್ಲಿ ಅಡ್ಡ ವಿಚಾರಣೆ ಇಲ್ಲವೆಂದು ಪರಿಗಣಿಸ ಲಾಯಿತು.

**ಪ್ರಾ.ಸಾ–2**

ಶ್ರೀ.ಕುಶಾಲಪ್ಪ ಗೌಡ,ಪಿ.ಸಿ ನಂ:1012 ಬಂಟ್ವಾಳ ನಗರ ಪೊಲೀಸ್ ಠಾಣೆ ಇವರು ಪ್ರಕರಣದ ಮಹಜರು ಸಾಕ್ಷಿದಾರರಾಗಿ ದಿನಾಂಕ:27–7–2010ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ. ತಾನು 2006ನೇ ಇಸವಿ ಮೇ ತಿಂಗಳಿಂದ ಇಲ್ಲಿಯವರೆಗೆ ಬಂಟ್ವಾಳ ನಗರ ಪೊಲೀಸ್ ಠಾಣೆಯಲ್ಲಿ ಪೊಲೀಸ್ ಕಾನ್ಸಟೇಬಲ್ ಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದೇನೆ. ತಾನು ದಿ: 19–8–2009ರಂದು ತಮ್ಮ ವೃತ್ತ ನಿರೀಕ್ಷಕರಾದ ಶ್ರೀ.ನಂಜುಂಡೇಗೌಡ, ಉಪ ನಿರೀಕ್ಷಕರಾದ ಶ್ರೀ.ವಿವೇಕನಂದ ಮತ್ತು ಪೊ.ಸಹಾಯಕ ನಿರೀಕ್ಷರಾದ ಶ್ರೀ.ಶಾಂತಪ್ಪ ಗೌಡ, ಪಿ.ಸಿ 1957 ಜಯಕುಮಾರ್, ಪಿ.ಸಿ–916 ಸೀತರಾಮ, ಪಿ.ಸಿ3 22 ತಸ್ಲೀಮ್ ಅರೀಪ್, ಪಿ.ಸಿ 608 ಶೈಲೆಂದ್ರ ,ಪಿ.ಸಿ 113 ಕೆ.ಭಟಪ್ಪ ರೈ, ಪಿ.ಸಿ 301 ಎಂ ಎ ಪೊಣಚ್ಚ ಇವರೊಂದಿಗೆ ಬಂಟ್ವಾಳ ತಾಲೂಕು ಬಿ.ಸಿ ರೋಡು ಪೊಳಲಿ–ಕೈಕಂಬ ಬಳಿ ವಾಹನಗಳ ತಪಾಸಣೆ ಪ್ರಯುಕ್ತ ರಾತ್ರಿ 10–00 ಗಂಟೆಗೆ ವಾಹನಗಳ ತಪಾಸಣೆ ಮಾಡುತ್ತಿರುವಾಗ ದಿ:20–8–2009ರ ಬೆಳಿಗ್ಗೆ ಜಾವ 1–00 ಗಂಟೆಗೆ ಬಂಟ್ವಾಳ ಮೂಡ ಗ್ರಾಮದ ತಲಪಾಡಿ ಕೆನರಾ ಮಿಲ್ಲಿನ ಹಿಂಬದಿ ದೊಡ್ಡ ಗೂಡ್ಸ್ ಲಾರಿಯಿಂದ ಇತರೆ 2 ಲಾರಿಗಳಿಗೆ ಸ್ಪಿರಿಟ್ ಕ್ಯಾನುಗಳನ್ನು ತುಂಬಿಸಿ ಅಕ್ರಮವಾಗಿ ಸಾಗಾಟ ಮಾಡಲು ನಿಲ್ಲಿಸಿ ಕೊಂಡಿರುತ್ತಾರೆ ಎಂಬ ಖಚಿತ ವರ್ತಮಾನ ವೃತ್ತ ನಿರೀಕ್ಷಕರಿಗೆ ದೊರೆತ ಮೇರೆಗೆ ವೃತ್ತ ನಿರೀಕ್ಷಕರು ಪಂಚರನ್ನು ಬರಮಾಡಿಕೊಂಡು ನಾವು ಇತರೆ ಸಿಬ್ಬಂಧಿಗಳು, ವೃತ್ತ ನಿರೀಕ್ಷಕರು ಎಲ್ಲರೂ ಸ್ಥಳಕ್ಕೆ ಹೋಗಿ ನೋಡಲಾಗಿ 2 ಲಾರಿಗಳನ್ನು ಮತ್ತು ಒಂದು ಸ್ವರಾಜ್ ಮಜ್ದಾ ಟೆಂಪೋ ನಿಂತುಕೊಂಡಿದ್ದು , ಅದರ ಎದುರುಗಡೆ ನಮಗೆ ಮುಖ ಪರಿಚಯ ಇರುವ ತಲಪಾಡಿ ವಾಸಿ ಕೊಕ್ಕಡ ಹನೀಪ್ ತಲಪಾಡಿ ವಾಸಿ ಆಶ್ರಫ್ ಹಾಗೂ ಪುತ್ತೂರಿನ ಪ್ರಧ್ವಿಪಾಲ್ ರೈ ಯಾನೆ ಅಲಿಯಾಸ್ ಪೃಧ್ವಿ ಹಾಗೂ ಅವನ ಬಳಿ ಇನ್ನೊಬ್ಬ ನಿಂತಿಕೊಂಡಿದ್ದು ಮತ್ತು ಸ್ವರಾಜ್ ಮಜ್ದಾ ಟೆಂಪೊ ದಲ್ಲಿ ಚಾಲಕ ಇರ್ಫಾನ್ ಕುಳಿತುಕೊಂಡಿರುವುದನ್ನು ನೋಡಿದೆನು. ತಾವುಗಳು ಸುತ್ತುವರಿದ್ದು ಸಮೀಪಿಸುತ್ತಿರುವುದನ್ನು ನೋಡಿ ಕೊಕ್ಕಡ ಹನೀಪ್ , ಪೃಧ್ವಿಪಾಲ ರೈ ಅಲಿಯಾಸ್ ಪೃಧ್ವಿ ಹಾಗೂ ಅವರ ಜೊತೆ ನಿಂತಿದ್ದ ಲಾರಿ ಚಾಲಕ ಕತ್ತಲಲ್ಲಿ ಓಡಿ ಹೋದರು. ಸ್ವರಾಜ್ ಮಜ್ದಾ ಟೆಂಪೋದಲ್ಲಿ ಕುಳಿತ್ತಿದ್ದ ಚಾಲಕ ಇರ್ಫಾನ್ ಎಂಬವನು ಟೆಂಪೋ ಸಮೇತ ಓಡಿಹೋಗಲು ವಾಹನ ಸ್ಟಾಟ್ ಮಾಡಿ ಪ್ರಯತ್ನಿಸುತ್ತಿರುವುದನ್ನು ಕಂಡು ತಾವು ಕೈಯಲ್ಲಿದ್ದ ಲಾಠಿಯನ್ನು

ಹಿಡಿದು ನಿಲ್ಲಿಸಲು ಸೂಚಿಸಿದೆವು. ಚಾಲಕನು ಟೆಂಪೋವನ್ನು ಅಲ್ಲಿಯೇ ಬಿಟ್ಟು ಓಡಿಹೋದನು. ಅಲ್ಲಿಯೇ ನಿಂತಿದ್ದ ಇನ್ನೊಂದು ಲಾರಿಯ ಚಾಲಕ ಆಶ್ರಫ್ ಎಂಬವನ್ನು ಹಿಡಿದು ನಿಲ್ಲಿಸಿ ವಶಕ್ಕೆ ತೆಗೆದು ಕೊಂಡು ಲಾರಿಗಳನ್ನು ಅಧಿಕಾರಿಗಳ ಮತ್ತು ಸ್ವತಂತ್ರ ಸಾಕ್ಷಿದಾರರ ಸಮಕ್ಷಮ ತಪಾಸಣೆ ಮಾಡಿದಾಗ ಲಾರಿಗಳಲ್ಲಿ ಹಾಗೂ ಟೆಂಪೋವಿನಲ್ಲಿ 35 ಲೀಟರು ತುಂಬುವಂತಹ ಬಿಳಿ ಬಣ್ಣದ ಕ್ಯಾನುಗಳಲ್ಲಿ ಅಕ್ರಮವಾಗಿ ಶರಾಬು ಹಾಗೂ ಬ್ರಾಂಡಿ ತಯಾರಿಸಲು ಉಪಯೋಗಿಸುವಂತಹ ರೆಕ್ಟಿಪೆಡ್ ಸ್ಪಿರಿಟ್ ಇರುವುದು ಕಂಡುಬಂತು. ಈ ಬಗ್ಗೆ ಚಾಲಕ ಆಶ್ರಫ್‌ನಲ್ಲಿ ಪೊಲೀಸ್ ನಿರೀಕ್ಷಕರು ವಿಚಾರಿಸಿದಾಗ ತಲಪಾಡಿಯ ಕೊಕ್ಕಡ ಹನೀಫ್ ಮತ್ತು ಪುತ್ತೂರಿನ ಪೃದ್ವಿಪಾಲ ರೈ ಇವರು ಸೇರಿಕೊಂಡು ದೊಡ್ಡ ಲಾರಿಯಲ್ಲಿ ಕ್ಯಾನುಗಳಲ್ಲಿ ಸ್ಪಿರಿಟನ್ನು ತರಿಸಿಕೊಂಡಿದ್ದು,ಅಲ್ಲಿಯೇ ಇದ್ದ ಲಾರಿಗಳಿಗೆ ಸದ್ರಿ ಸ್ಪಿರಿಟನ್ನು ಪುತ್ತೂರಿಗೆ ಹಾಗೂ ಕೇರಳದ ಕಾಸರಗೋಡಿಗೆ ಅಕ್ರಮವಾಗಿ ಸಾಗಾಟ ಮಾಡುವುದಾಗಿ, ಸದ್ರಿ ಸ್ಪಿರಿಟನ್ನು ಸಾಗಾಟ ಮಾಡಲು ಯಾವುದೇ ದಾಖಲಾತಿಗಳು ಇಲ್ಲವೆಂದು ತಿಳಿಸಿದರು. ಆರೋಪಿಗಳು ಅಕ್ರಮವಾಗಿ ಯಾವುದೇ ದಾಖಲಾತಿಗಳು ಇಲ್ಲದೇ ರೆಕ್ಟಿಫೈಡ್ ಸ್ಪಿರಿಟನ್ನು ಸಾಗಾಟ ಮಾಡುವುದು ಕಾನೂನುಬಾಹಿರ ಎಂದು ಕಂಡುಬಂದು ಕಾರಣ ಚಾಲಕ ಆಶ್ರಫ್ ನನ್ನು ದಸ್ತಗಿರಿ ಮಾಡಿ ಸಾಗಾಟಕ್ಕೆ ಉಪಯೋಗಿಸಿದ್ದ ಸ್ವರಾಜ್ ಮಜ್ದಾ ಟೆಂಪೋ ನಂ: ಕೆಎ–19–4237 ಟಾಟಾ ಗೂಡ್ಸ ಲಾರಿ ನಂ:ಹೆಚ್ ಅರ್–3 8–ಎಫ್–4904 ಮತ್ತು ಟಾಟಾ 1109 ಟರ್ಬೋ ಲಾರಿ ಸಂ: ಕೆ ಎ–20–ಎಎ–333 ನ್ನು ಹಾಗೂ ಲಾರಿಗಳ ಸಮೀಪ ನಿಲ್ಲಿಸಿಕೊಂಡಿದ್ದ ಮೋಟಾರ್ ಬೈಕ್ ಸಂ:ಕೆಎ–19–ಯು–4452 ನ್ನು ಹಾಗೂ 2 ಲಾರಿ ಮತ್ತು 1 ಟೆಂಪೊದಲ್ಲಿ ಸಾಗಾಟ ಮಾಡಲು ತುಂಬಿಸಿಟ್ಟಿದ್ದ 3 5 ಲೀಟರು ಸ್ಪಿರಿಟ್ ತುಂಬಿದ್ದ ಒಟ್ಟು 395 ಪ್ಲಾಸ್ಟಿಕ್ ಕ್ಯಾನುಗಳನ್ನು ಮಹಜರು ಮುಖೇನಾ ಸ್ವಾಧೀನ ಪಡಿಸಿಕೊಂಡು ಸ್ಥಳದಲ್ಲಿಯೇ, ಮಹಜರನ್ನು ತಯಾರಿಸ ಲಾಯಿತು. ಸದ್ರಿ ಮಹಜರನ್ನು ಪೊಲೀಸ್ ವೃತ್ತ ನಿರೀಕ್ಷಕರ ಆದೇಶದಂತೆ ತನ್ನ ಸ್ವಹ ಹಸ್ತದಲ್ಲಿ ಬರೆದಿರುತ್ತೇನೆ. ಸದ್ರಿ ಮಹಜರಿಗೆ ತಾನು ಸಹಿ ಮಾಡಿದ್ದು, ಅದರ ಮೇಲಿನ ಸಹಿಯನ್ನು ತಾನು ಈಗ ನೋಡಿ ನಿಶಾನೆ ಪಿ–1 ಬಿ ಎಂದು ಗುರುತಿಸಿರುತ್ತೇನೆ. ನಂತರ ಸದ್ರಿ ಜಪ್ತುಪಡಿಸಿಕೊಂಡ ವಾಹನಗಳ ಸಮೇತ ಮದ್ಯಸಾರ ಮತ್ತು ಆರೋಪಿ ವ್ಯಕ್ತಿಯನ್ನು ಬಂಟ್ವಾಳ ನಗರ ಠಾಣೆಗೆ ಕರೆದುಕೊಂಡು ಹೋಗಲಾಯಿತು ಎಂದು ಸಾಕ್ಷಿ ನುಡಿದಿರುತ್ತಾರೆ.

**ಪಾಟೀ ಸವಾಲು:** ಜಪ್ತು ಪಡಿಸಿಕೊಂಡ ವಾಹನಗಳ ಮಾಲೀಕರಾಗಲೀ ಅಥವಾ ಮಾಲೀಕರ ಪರ ಪ್ರತಿನಿದಿಗಳಾಗಲೀ ಈ ಪ್ರಾದಿಕಾರದ ಮುಂದೆ ಹಾಜರಾಗದೇ ಇರುವುದರಿಂದ ಪ್ರಕರಣದಲ್ಲಿ ಅಡ್ಡ ವಿಚಾರಣೆ ಇಲ್ಲವೆಂದು ಪರಿಗಣಿಸಲಾಯಿತು.

**ಪ್ರಾ.ಸಾ–3**

ಶ್ರೀ.ಸಾಂತಪ್ಪ ಗೌಡ,ಸಹಾಯಕ ಪೊಲೀಸ್ ಉಪ ನಿರೀಕ್ಷಕರು, ಬಂಟ್ವಾಳ ನಗರ ಪೊಲೀಸ್ ಠಾಣೆ ಇವರು ಪ್ರಕರಣದ ಮಹಜರು ಸಾಕ್ಷಿದಾರರಾಗಿ ದಿನಾಂಕ:27–7–2010ರಂದು ಈ ಪ್ರಾದಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ. ನಾನು 2008ನೇ ಇಸವಿ ಮೇ ತಿಂಗಳಿಂದ ಇಲ್ಲಿಯವರೆಗೆ ಬಂಟ್ವಾಳ ನಗರ ಪೊಲೀಸ್ ಠಾಣೆಯಲ್ಲಿ ಸಹಾಯಕ ಪೊಲೀಸ್ ಉಪ ನಿರೀಕ್ಷಕನಾಗಿ ಕರ್ತವ್ಯ ನಿರ್ವಹಿಸುತ್ತಿದ್ದೇನೆ. ದಿನಾಂಕ:19–8–2009ರಂದು ನಮ್ಮ ವೃತ್ತ ನಿರೀಕ್ಷಕರಾದ ಶ್ರೀ.ನಂಜುಂಡೇಗೌಡ ಮತ್ತು ಪೊಲೀಸ್ ಉಪ ನಿರೀಕ್ಷಕರು ಶ್ರೀ.ವಿವೇಕನಂದ ಪಿ.ಸಿ 1957 ಜಯಕುಮಾರ್, ಪಿ.ಸಿ 1012 ಕುಶಾಲಪ್ಪ ಗೌಡ, ಪಿ.ಸಿ916 ಸೀತರಾಮ, ಪಿ.ಸಿ.322 ತಸ್ಲೀಮ್ ಅರೀಫ್, ಪಿ.ಸಿ 608 ಶೈಲೇಂದ್ರ ,ಪಿ.ಸಿ 113 ಕೆ.ಭಟಪ್ಪ ರೈ, ಪಿ.ಸಿ 301 ಎಂಎ ಪುಣಚ್ಚ ಇವರೊಂದಿಗೆ ಬಂಟ್ವಾಳ ತಾಲೂಕು ಬಿ.ಸಿ ರೋಡು ಪೊಳಲಿ –ಕೈಕಂಬ ಬಳಿ ವಾಹನಗಳ ತಪಾಸಣೆ ಪ್ರಯುಕ್ತ ರಾತ್ರಿ 10–00 ಗಂಟೆಗೆ ವಾಹನಗಳ ತಪಾಸಣೆ ಮಾಡುತ್ತಿರುವಾಗ ದಿ:20–8–2009 ರಂದು ಬೆಳಿಗ್ಗೆ ಜಾವ 1–00 ಗಂಟೆಗೆ ಬಂಟ್ವಾಳ ಮೂಡ ಗ್ರಾಮದ ತಲಪಾಡಿ ಕೆನರಾ ಮಿಲ್ಲಿನ ಹಿಂಬದಿ ದೊಡ್ಡ ಗೂಡ್ಸ್ ಲಾರಿಯಿಂದ ಇತರೆ 2 ಲಾರಿಗಳಿಗೆ ಸ್ಪಿರಿಟ್ ಕ್ಯಾನುಗಳನ್ನು ತುಂಬಿಸಿ ಅಕ್ರಮವಾಗಿ ಸಾಗಾಟ ಮಾಡಲು ನಿಲ್ಲಿಸಿ ಕೊಂಡಿರುತ್ತಾರೆ ಎಂಬ ಖಚಿತ ವರ್ತಮಾನ ವೃತ್ತ ನಿರೀಕ್ಷಕರಿಗೆ ದೊರೆತ ಮೇರೆಗೆ ವೃತ್ತ ನಿರೀಕ್ಷಕರು ಪಂಚರನ್ನು ಬರಮಾಡಿಕೊಂಡು ತಾವು ಮತ್ತು ಇತರೆ ಸಿಬ್ಬಂಧಿಗಳು ಹಾಗೂ ವೃತ್ತ ನಿರೀಕ್ಷಕರು ಎಲ್ಲರೂ ಸ್ಥಳಕ್ಕೆ ಹೋಗಿ ನೋಡಲಾಗಿ 2 ಲಾರಿಗಳನ್ನು ಮತ್ತು ಒಂದು ಸ್ವರಾಜ್ ಮಜ್ದಾ ಟೆಂಪೋ ನಿಂತುಕೊಂಡಿದ್ದು ಅದರ ಎದುರುಗಡೆ ತಮಗೆ ಮುಖ ಪರಿಚಯ ಇರುವ ತಲಪಾಡಿ ವಾಸಿ ಕೊಕ್ಕಡ ಹನೀಪ್, ತಲಪಾಡಿ ವಾಸಿ ಆಶ್ರಫ್ ಹಾಗೂ ಪುತ್ತೂರಿನ ಪ್ರದ್ವಿಪಾಲ್ ರೈ ಯಾನೆ ಅಲಿಯಾಸ್ ಪೃದ್ವಿ ಹಾಗೂ ಅವನ ಬಳಿ ಇನ್ನೊಬ್ಬ ನಿಂತಿಕೊಂಡಿದ್ದು ಮತ್ತು ಸ್ವರಾಜ್ ಮಜ್ದಾ ಟೆಂಪೊದಲ್ಲಿ ಚಾಲಕ ಇರ್ಫಾನ್ ಕುಳಿತು ಕೊಂಡಿರುವುದನ್ನು ನೋಡಿದೆವು. ನಾನು ಮತ್ತು ಇತರ ಸಿಬ್ಬಂಧಿಗಳು ಸದ್ರಿ ವಾಹನಗಳನ್ನು ಸುತ್ತುವರಿದ್ದು ಸಮೀಪಿಸುತ್ತಿರುವುದನ್ನು ನೋಡಿ ಕೊಕ್ಕಡ ಹನೀಪ್ ,ಪೃದ್ವಿಪಾಲ ರೈ ಅಲಿಯಾಸ್ ಪೃದ್ವಿ ಹಾಗೂ ಅವರ ಜೊತೆ ನಿಂತಿದ್ದ ಲಾರಿ ಚಾಲಕ ಕತ್ತಲಲ್ಲಿ ಓಡಿಹೋದರು. ಸ್ವರಾಜ್ ಮಜ್ದಾ ಟೆಂಪೋದಲ್ಲಿ ಕುಳಿತ್ತಿದ್ದ ಚಾಲಕ ಇರ್ಫಾನನ್ನು ಟೆಂಪೋ ಸಮೇತ ಓಡಿಹೋಗಲು ವಾಹನ ಸ್ಟಾರ್ಟ್ ಮಾಡಿ ಪ್ರಯತ್ನಿಸುತ್ತಿರುವುದನ್ನು ಕಂಡು ಕೈಯಲ್ಲಿದ್ದ ಲಾಠಿಯನ್ನು ಹಿಡಿದು ನಿಲ್ಲಿಸಲು ಸೂಚಿಸಿದೆವು. ಚಾಲಕನು ಟೆಂಪೋವನ್ನು ಅಲ್ಲಿಯೇ ಬಿಟ್ಟು ಓಡಿಹೋದನು . ಅಲ್ಲಿಯೇ ನಿಂತಿದ್ದ ಚಾಲಕ ಆಶ್ರಫ್ ಎಂಬವನ್ನು ಹಿಡಿದು ನಿಲ್ಲಿಸಿ ವಶಕ್ಕೆ ತೆಗೆದುಕೊಂಡು ಲಾರಿಗಳನ್ನು ತಪಾಸಣೆ ಮಾಡಿದಾಗ ಲಾರಿಗಳಲ್ಲಿ ಹಾಗೂ ಟೆಂಪೋಗಳಲ್ಲಿ 3 5 ಲೀಟರು ತುಂಬುವಂತಹ ಬಿಳಿ ಬಣ್ಣದ ಕ್ಯಾನುಗಳಲ್ಲಿ ಅಕ್ರಮವಾಗಿ ಶರಾಬು ಹಾಗೂ ಬ್ರಾಂಡಿ ತಯಾರಿಸಲು ಅಕ್ರಮವಾಗಿ ಸಾಗಾಟ ಮಾಡಲು ತುಂಬಿಸಿದ್ದ ರೆಕ್ಟಿಪೆಡ್ ಸ್ಪಿರಿಟ್ ಇರುವುದು ಕಂಡುಬಂತು. ಈ ಬಗ್ಗೆ ಚಾಲಕ ಆಶ್ರಫ್‌ನಲ್ಲಿ ಪೊಲೀಸ್ ನಿರೀಕ್ಷಕರು ವಿಚಾರಿಸಿದಾಗ ತಲಪಾಡಿಯ ಕೊಕ್ಕಡ ಹನೀಪ್ ಮತ್ತು ಪುತ್ತೂರಿನ ಪೃದ್ವಿಪಾಲ ರೈ ಇವರು ಸೇರಿಕೊಂಡು ದೊಡ್ಡ ಲಾರಿಯಲ್ಲಿ ಕ್ಯಾನುಗಳಲ್ಲಿ ಸ್ಪಿರಿಟನ್ನು ತರಿಸಿ ಕೊಂಡಿದ್ದು,ಸದ್ರಿ ಲಾರಿಯಿಂದ ಇತರ ಲಾರಿಗಳಿಗೆ ಸದ್ರಿ ಸ್ಪಿರಿಟನ್ನು ಪುತ್ತೂರಿಗೆ ಹಾಗೂ ಕೇರಳದ ಕಾಸರಗೋಡಿಗೆ ಸಾಗಾಟ ಮಾಡುವುದಾಗಿ ,ಸದ್ರಿ ಸ್ಪಿರಿಟನ್ನು ಸಾಗಾಟ ಮಾಡಲು ಯಾವುದೇ ದಾಖಲಾತಿಗಳು ಇಲ್ಲವೆಂದು ತಿಳಿಸಿದರು. ಆರೋಪಿಗಳು ಅಕ್ರಮವಾಗಿ ಯಾವುದೇ ದಾಖಲಾತಿಗಳು ಇಲ್ಲದೇ ರೆಕ್ಟಿಫೈಡ್ ಸ್ಪಿರಿಟನ್ನು ಸಾಗಾಟ ಮಾಡಿ ಕರ್ನಾಟಕ ಅಬಕಾರಿ ಕಾಯಿದೆಯನ್ನು ಉಲ್ಲಂಘಿಸಿರುವುದು ಕಂಡುಬಂದಿರುವುದರಿಂದ ಚಾಲಕನನ್ನು ದಸ್ತಗಿರಿ ಮಾಡಿ ಸಾಗಾಟಕ್ಕೆ ಉಪಯೋಗಿಸಿದ್ದ ಸ್ವರಾಜ್ ಮಜ್ದಾ ಟೆಂಪೋ ನಂ: ಕೆಎ–19–4237 ಟಾಟಾ ಗೂಡ್ಸ್ ಲಾರಿ ನಂ:ಹೆಚ್ ಆರ್–38–ಎಫ್–4904 ಮತ್ತು ಟಾಟಾ 1109 ಟರ್ಬೋ ಲಾರಿ ಸಂ: ಕೆ ಎ–20–ಎಎ–333 ನ್ನು ಹಾಗೂ ಲಾರಿಗಳ ಸಮೀಪ ನಿಲ್ಲಿಸಿಕೊಂಡಿದ್ದ ಮೋಟಾರ್ ಬೈಕ್ ಸಂ: ಕೆಎ–19–ಯು–4452 ನ್ನು ಹಾಗೂ 2 ಲಾರಿ ಮತ್ತು 1 ಟೆಂಪೊದಲ್ಲಿ ಸಾಗಾಟ ಮಾಡಲು ತುಂಬಿಸಿಟ್ಟಿದ್ದ 35 ಲೀಟರು ಸ್ಪಿರಿಟ್ ತುಂಬಿದ್ದ ಒಟ್ಟು 395

ಪ್ಲಾಸ್ಟಿಕ್ ಕ್ಯಾನುಗಳಿದ್ದು, ಅವುಗಳನ್ನು ಮಹಜರು ಮುಖೇನಾ ಸ್ವಾಧೀನ ಪಡಿಸಿಕೊಂಡು ಸ್ಥಳದಲ್ಲಿಯೇ ಮಹಜರನ್ನು ತಯಾರಿಸಿ ಸದ್ರಿ ಮಹಜರಿಗೆ ತಾನು ಸಹಿ ಮಾಡಿರುತ್ತೇನೆ. ತನ್ನ ಸಹಿಯನ್ನು ಈಗ ನೋಡಿ ಅದನ್ನು ನಿಶಾನೆ ಪಿ–1ಸಿ ಎಂದು ಗುರುತಿಸಲಾಯಿತು.

**ಪಾಟೀ ಸವಾಲು:** ಜಪ್ತು ಪಡಿಸಿಕೊಂಡ ವಾಹನಗಳ ಮಾಲೀಕರಾಗಲೀ ಅಥವಾ ಮಾಲೀಕರ ಪರ ಪ್ರತಿನಿಧಿಗಳಾಗಲೀ ಈ ಪ್ರಾಧಿಕಾರದ ಮುಂದೆ ಹಾಜರಾಗದೇ ಇರುವುದರಿಂದ ಪ್ರಕರಣದಲ್ಲಿ ಅಡ್ಡ ವಿಚಾರಣೆ ಇಲ್ಲವೆಂದು ಪರಿಗಣಿಸ ಲಾಯಿತು.

**ಪ್ರಾ.ಸಾ–4**

ಶ್ರೀ.ಕಮಲಾಕ್ಷ ಬಲ್ಯಾಯ, ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ ಇವರು ಪ್ರಕರಣದ ತನಿಖಾದಿಕಾರಿಗಳಾಗಿ ದಿ:27–07–2010ರಂದು ಈಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷ್ಯ ನುಡಿಯುತ್ತಾ ತಾನು ದಿ:19–8–2008ರಿಂದ ಇಂದಿನವರೆಗೆ ಬಂಟ್ವಾಳ ಅಬಕಾರಿ ವಲಯ ಕಛೇರಿಯಲ್ಲಿ ಅಬಕಾರಿ ನಿರೀಕ್ಷಕನಾಗಿ ಕರ್ತವ್ಯ ನಿರ್ವಹಿಸುತ್ತಿದ್ದೇನೆ. ತಾನು ದಿ:16–9–2009ರ ಅಧಿಕೃತ ಅಧಿಕಾರಿಗಳ ಆದೇಶದಂತೆ ಬಂಟ್ವಾಳ ನಗರ ಪೊಲೀಸ್ ಠಾಣೆ ಕ್ರೈಂ ಸಂ: 163/2009 ದಿ:20–8–2009ರ ಲ್ಲಿ ಜಪ್ತು ಪಡಿಸಿಕೊಳ್ಳಲಾದ ವಾಹನಗಳು 1) ಸ್ವರಾಜ್ ಮಜ್ದಾ ಟೆಂಪೋ ನಂ: ಕೆಎ–19–4237 2) ಟಾಟಾ ಗೂಡ್ಸ ಲಾರಿ ನಂ:ಹೆಚ್ ಆರ್–38–ಎಫ್–4904 3) ಟಾಟಾ 1109 ಟರ್ಬೋ ಲಾರಿ ಸಂ: ಕೆಎ–20–ಎಎ–333 ಹಾಗೂ 4) ಮೋಟಾರ್ ಬೈಕ್ ಸಂ:ಕೆಎ–19–ಯು–4452 ಮತ್ತು 35 ಲೀ ಸಾಮರ್ಥ್ಯದ 3 95 ಪ್ಲಾಸ್ಟಿಕ್ ಕ್ಯಾನುಗಳಲ್ಲಿ ಮದ್ಯಸಾರವನ್ನು ಪೊಲೀಸ್ ಉಪ ನಿರೀಕ್ಷಕರು, ಬಂಟ್ವಾಳ ನಗರ ಪೊಲೀಸ್ ಠಾಣೆ ಇವರಿಂದ ದಿ:8–3–2010ರಂದು ಪಡೆದುಕೊಂಡಿರುತ್ತೇನೆ. ಸದ್ರಿ ಸೊತ್ತುಗಳನ್ನು ಪಡೆದುಕೊಂಡ ಬಗ್ಗೆ ದಿ:20–3–2010ರಂದು ಅದಿಕೃತ ಅಧಿಕಾರಿಗಳಿಗೆ ವರದಿಯನ್ನು ಸಲ್ಲಿಸಿರುತ್ತೇನೆ. ಅದನ್ನು ಈಗ ನೋಡಿ ನಿಶಾನೆ ಪಿ–3 ಎಂದು ಗುರುತಿಸಿರುತ್ತೇನೆ.

ಸದ್ರಿ ಹಸ್ತಾಂತರ ಪಡೆದುಕೊಂಡ ಕ್ಯಾನುಗಳ ಪೈಕಿ 15 ಪ್ಲಾಸ್ಟಿಕ್ ಕ್ಯಾನುಗಳಿಂದ 750 ಮಿಲಿ ಲೀಟರಿನಂತೆ 15 ಬಾಟಲಿಗಳಲ್ಲಿ ರಾಸಾಯನಿಕ ವಿಶ್ಲೇಷಣೆಗಾಗಿ ಮಾದರಿ ತೆಗೆದು ಸದ್ರಿ ಮಾದರಿಗಳನ್ನು ಕಛೇರಿ ಅಬಕಾರಿ ರಕ್ಷಕರಾದ ಶ್ರೀ.ಎ.ಜಗನ್ನಾಥ ನಾಯ್ಕ ಇವರ ಮುಖಾಂತರ ದಿ:17–4–2010 ರಂದು ಬೆಂಗಳೂರಿನ ರಾಸಾಯನಿಕ ವಿಶ್ಲೇಷಕರ ಕಛೇರಿಗೆ ಕಳುಹಿಸಿಕೊಟ್ಟಿರುತ್ತೇನೆ. ದಿನಾಂಕ:20–4–2010ರಂದು ವಿಶ್ಲೇಷಣಾ ವರದಿಯನ್ನು ಪಡೆದು ಕೊಂಡಿರುತ್ತೇನೆ. ಸದ್ರಿ ರಾಸಾಯನಿಕ ವಿಶ್ಲೇಷಣಾ ವರದಿಯನ್ನು ಈಗ ನೋಡಿ ಅದನ್ನು ನಿಶಾನೆ ಪಿ–4 ಎಂದು ಗುರುತಿಸಿ ರುತ್ತೇನೆ. ಮದ್ಯಸಾರವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸುವರೇ ಎಲ್ಲಾ ದಾಖಲಾತಿಗಳೊಂದಿಗೆ ಅದಿಕೃತ ಅದಿಕಾರಿಗಳಿಗೆ ದಿ:3 –5–2010ರಂದು ವರದಿ ಸಲ್ಲಿಸಿರುತ್ತೇನೆ. ಅದನ್ನು ಈಗ ನೋಡಿ ನಿಶಾನೆ ಪಿ–5 ಎಂದು ಗುರುತಿಸಿರುತ್ತೇನೆ. ಅಧಿಕೃತ ಅಧಿಕಾರಿಗಳ ಆದೇಶ ದಿ:25–5–2010ರಂತೆ ಜಪ್ತುಪಡಿಸಿಕೊಂಡ ಎಲ್ಲಾ 395 ಪ್ಲಾಸ್ಟಿಕ್ ಕ್ಯಾನುಗಳಲ್ಲಿದ್ದ ಮದ್ಯಸಾರ ವನ್ನು ದಿ:12–6–2010ರಂದು ಮಹಜರು ಜರುಗಿಸಿ ನಾಶಪಡಿಸಿ ಈ ಬಗ್ಗೆ ಒಂದು ವರದಿಯನ್ನು ಅಧಿಕೃತ ಅಧಿಕಾರಿಗಳ ಪ್ರಾದಿಕಾರಕ್ಕೆ ದಿ:16–6–2010ರಂದು ಸಲ್ಲಿಸಿರುತ್ತೆನೆ. ಅದನ್ನು ಈಗ ನೋಡಿ ನಿಶಾನೆ ಪಿ–6 ಎಂದು , ಅದರ ಮೇಲಿನ ತನ್ನ ಸಹಿಯನ್ನು ನಿಶಾನೆ ಪಿ–6 ಎ ಎಂದು ಗುರುತಿಸಿರುತ್ತೇನೆ.

ಜಪ್ತುಪಡಿಸಿಕೊಂಡ ವಾಹನಗಳ ಪೈಕಿ 1) ಸ್ವರಾಜ್ ಮಜ್ದಾ ಲಾರಿ ಸಂ: ಕೆಎ–19–4237 (2) ಟಾಟಾ 1109 ಟರ್ಬೋ ಲಾರಿ ಸಂ: ಕೆಎ–20–ಎಎ–333 ಮತ್ತು (3) ಮೋಟಾರ್ ಬೈಕ್ ಸಂ:ಕೆಎ–19–ಯು–4452 ಇದರ ಬಿ ಎಕ್ಸ್‌ಟ್ರಾಕ್ಟ್ ವರದಿ ಪ್ರತಿಗಳನ್ನು ಪ್ರಕರಣ ಪತ್ತೆಹಚ್ಚಿದ ಪೊಲೀಸ್ ಅದಿಕಾರಿಗಳಿಂದಲೇ ಪಡೆದುಕೊಳ್ಳಲಾಗಿದ್ದು, ಉಳಿದ ಇನ್ನೊಂದು ವಾಹನ ಟಾಟಾ ಗೂಡ್ಸ್ ಲಾರಿ ನಂ:ಹೆಚ್ ಅರ್–3 8–ಎಫ್–4904 ಇದರ ಬಿ ಎಕ್ಸ್‌ಟ್ರಾಕ್ಟ್ ವರದಿ ಬಗ್ಗೆ ಪೊಲೀಸ್ ಅಧಿಕಾರಿಗಳಿಂದ ದಿ:8–3–2010ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿ, ಫರೀದಾಬಾದ್, ಹರಿಯಾಣ ರಾಜ್ಯ ಇವರಿಗೆ ಪತ್ರ ಬರೆಯಲಾಗಿದ್ದು, ಅವರಿಂದ ಬಿ ಎಕ್ಸ್ ಟ್ರಾಕ್ಟ್ ವರದಿ ಬಾರದೇ ಇರುವ ಕಾರಣ ತಾನು ದಿ:15–4–2010 ರಂದು ಮತ್ತೆ ಬಿ ಎಕ್ಸ್‌ಟ್ರಾಕ್ಟ್ ವರದಿಗಾಗಿ ಜಿಲ್ಲಾ ಸಾರಿಗೆ ಅಧಿಕಾರಿಗಳು ಫರಿದಾಬಾದ್,ಹರಿಯಾಣ ರಾಜ್ಯ ಇವರಿಗೆ ಪತ್ರ ಬರೆದಿರುತ್ತೇನೆ. ಆ ಪತ್ರದ ಪ್ರತಿಯನ್ನು ಈಗ ನೋಡಿ ನಿಶಾನೆ ಪಿ–7 ಎಂದು ,ಅದರ ಮೇಲಿನ ತನ್ನ ಸಹಿಯನ್ನು ನಿಶಾನೆಪಿ–7ಎ ಎಂದು ವಿಚಾರಣೆ ವೇಳೆ ಗುರುತಿಸಿರುತ್ತೇನೆ. ಆದರೆ ಸದ್ರಿ ಸಾರಿಗೆ ಅಧಿಕಾರಿಗಳಿಂದ ಯಾವುದೇ ಬಿ ರಿಜಿಸ್ಟ್ರಾರ್ ಎಕ್ಸ್‌ಟ್ರಾಕ್ಟ್ ವರದಿ ನನ್ನಗಾಗಲೀ ಅದಿಕೃತ ಅಧಿಕಾರಿಗಳ ಪ್ರಾದಿಕಾರಕ್ಕೆ ಬಂದಿರುವುದಿಲ್ಲ. ಪ್ರಕರಣ ಪತ್ತೆ ಹಚ್ಚಿ, 11 ತಿಂಗಳುಗಳು ಮೇಲಾಗಿದ್ದು,ಜಪ್ತು ಪಡಿಸಿಕೊಂಡ ವಾಹನಗಳನ್ನು ತೆರೆದ ವಾತಾವರಣದಲ್ಲಿ ನಿಲ್ಲಿಸಲಾಗಿದ್ದು, ಅವುಗಳ ಗುಣಮಟ್ಟ ದಿನೇದಿನೇ ಕ್ಷೀಣಗೊಂಡು ಅದರಿಂದ ಸರ್ಕಾರಕ್ಕೆ ಅರ್ಥಿಕ ನಷ್ಟವುಂಟಾಗುವ ಸಾಧ್ಯತೆ ಇರುವುದರಿಂದ ಸದ್ರಿ ಪ್ರಕರಣದಲ್ಲಿ ಜಪ್ತುಪಡಿಸಿಕೊಂಡ ಎಲ್ಲಾ ವಾಹನಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಕೊಂಡು ವಿಲೇಮಾಡಲು ಅದೇಶ ನೀಡಬೇಕಾಗಿ ದಿ:2–6–2010ರಂದು ಅಧಿಕೃತ ಅಧಿಕಾರಿಗಳಿಗೆ ವರದಿ ಸಲ್ಲಿಸಿರುತ್ತೆನೆ. ಸದ್ರಿ ಮೂಲ ಪತ್ರವನ್ನು ಈಗ ನೋಡಿ ಅದನ್ನು ನಿಶಾನೆ ಪಿ–8 ಎಂದು, ಅದರ ಮೇಲಿನ ತನ್ನ ಸಹಿಯನ್ನು ನಿಶಾನೆ ಪಿ–8ಎ ಎಂದು ಗುರುತಿಸಿರುತ್ತೇನೆ.

**ಪಾಟೀ ಸವಾಲು:** ಜಪ್ತು ಪಡಿಸಿಕೊಂಡ ವಾಹನಗಳ ಮಾಲೀಕರಾಗಲೀ ಅಥವಾ ಮಾಲೀಕರ ಪರ ಪ್ರತಿನಿಧಿಗಳಾಗಲೀ ಈ ಪ್ರಾದಿಕಾರದ ಮುಂದೆ ಹಾಜರಾಗದೇ ಇರುವುದರಿಂದ ಪ್ರಕರಣದಲ್ಲಿ ಅಡ್ಡ ವಿಚಾರಣೆ ಇಲ್ಲವೆಂದು ಪರಿಗಣಿಸ ಲಾಯಿತು.

ಈ ಪ್ರಕರಣದ ಫಿರ್ಯಾದುದಾರರು ಹಾಗೂ ಮಹಜರು ಸಾಕ್ಷಿದಾರರು ಮತ್ತು ತನಿಖಾಧಿಕಾರಿಗಳು ಪೂರಕವಾಗಿ ನೀಡಿರುವ ಸಾಕ್ಷ್ಯಧಾರದ ಮೇಲೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ದಿ:20–8–2009ರಂದು ಜಪ್ತು ಸಂದರ್ಭದಲ್ಲಿ ವಾಹನ (1) ಸ್ವರಾಜ್ ಮಜ್ದಾ ಟೆಂಪೋ ನಂ: ಕೆ ಎ–19–4237 (2) ಟಾಟಾ ಗೂಡ್ಸ ಲಾರಿ ನಂ:ಹೆಚ್ ಅರ್–38–ಎಫ್–4904 (3) ಟಾಟಾ 1109 ಟರ್ಬೋ ಲಾರಿ ಸಂ: ಕೆ ಎ–20–ಎಎ–333 ಮತ್ತು ಸದ್ರಿ ಮೂರು ಲಾರಿಗಳ ಸಾಗಾಟ ಮಾಡುವ ಸಂದರ್ಭದಲ್ಲಿ ಸದ್ರಿ ಲಾರಿಗಳಿಗೆ ದಾರಿ ತೋರಿಸಲು ಬೆಂಗಾವಲಾಗಿ ಉಪಯೋಗಿಸಿದ ನಕಲಿ ನಂಬರ್ ಪ್ಲೇಟು ಅಳವಡಿಸಿದ ಮೋಟಾರ್ ಬೈಕ್ ಸಂ:ಕೆಎ–19–ಯು–4452 ವಾಹನಗಳಲ್ಲಿ ಅಕ್ರಮವಾಗಿ ಮದ್ಯಸಾರ ಸಾಗಾಣಿಕೆಗೆ ಬಳಸಿರುವುದು ಸಾಬೀತಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ, ಅಥವಾ ಪತ್ತೆಯಾಗುವ ಸಾಧ್ಯತೆ ಇಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ

ಜಪ್ತಾಗಿರುವ ಸೊತ್ತುಗಳು ತಮ್ಮದೆಂದು ಅವುಗಳು ಕಾನೂನು ಬದ್ಧವಾಗಿದೆಯೆಂದು ಸಾಕ್ಷಧಾರಗಳೊಂದಿಗೆ ಸಾಭೀತು ಪಡಿಸದೇ ಇದ್ದಲ್ಲಿ, ಸದ್ರಿ ಸೊತ್ತುಗಳು, ಅಬಕಾರಿ ಕಾಯ್ದೆ ಕಲಂ 43 ಸಿ ರ ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ ಅಂತಹ ಸೊತ್ತುಗಳನ್ನು ಕಲಂ 43 ಸಿ ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳ ಬಹುದಾಗಿರುತ್ತದೆ.

ಪ್ರಾಧಿಕಾರದಲ್ಲಿ ಲಭ್ಯವಾಗಿರುವ ದಾಖಲಾತಿಗಳ ಪ್ರಕಾರ ದಿನಾಂಕ 20–8–2009 ರಂದು ಪೊಲೀಸ್ ಉಪ ನಿರೀಕ್ಷಕರು,ಬಂಟ್ವಾಳ ನಗರ ಪೊಲೀಸ್ ಠಾಣೆ,ಬಂಟ್ವಾಳ ಇವರು ಅಕ್ರಮವಾಗಿ ಮದ್ಯಸಾರವನ್ನು ನಕಲಿ ಸಾರಾಯಿ/ ಮದ್ಯ ತಯಾರಿಕೆಗಾಗಿ ವಾಹನಗಳ ಮೂಲಕ ಸಾಗಾಟ ಮಾಡುತ್ತಿರುವುದನ್ನು ಪತ್ತೆಹಚ್ಚಿ ,ಸದ್ರಿ ವಾಹನಗಳನ್ನು ಮತ್ತು ಅಕ್ರಮ ಮದ್ಯಸಾರವನ್ನು ಸ್ಥಳ ಮಹಜರು ಮುಖೇನಾ ಸ್ವಾಧೀನಪಡಿಸಿದ್ದು ಹಾಗೂ ವಾಹನಗಳಲ್ಲಿ ಪತ್ತೆ ಹಚ್ಚಲ್ಪಟ್ಟಿರುವ ವಸ್ತು ರಾಸಾಯನಿಕ ತಜ್ಞರ ವರದಿಯ ಪ್ರಕಾರ ಮದ್ಯಸಾರ ಎಂದು ದೃಢಪಟ್ಟಿದ್ದು, ಸದ್ರಿ ವಾಹನಗಳನ್ನು ಕರ್ನಾಟಕ ಅಬಕಾರಿ ಕಾನೂನಿನ ಉಲ್ಲಂಘನೆಗಾಗಿ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುವುದರಿಂದ ಈ ಪ್ರಾಧಿಕಾರವು ವಾಹನಗಳ ಮುಟ್ಟುಗೋಲು ನಡವಳಿ ಬಗ್ಗೆ ತೀರ್ಮಾನ ತೆಗೆದು ಕೊಳ್ಳಬೇಕಾಗಿರುತ್ತದೆ.

ಸದ್ರಿ ಮೊಕದ್ದಮೆಯಲ್ಲಿ ಜಪ್ತುಪಡಿಸಿಕೊಳ್ಳಲಾದ ವಾಹನಗಳನ್ನು ವಶಪಡಿಸಿ ಕೊಂಡು ಸುಮಾರು 11 ತಿಂಗಳು ಕಳೆದರೂ ವಾಹನಗಳ ಮಾಲೀಕರಾಗಲೀ ಅಥವಾ ವಾಹನಗಳ ಸುಪರ್ಧಿ ಹೊಂದಿರುವವರು ತಮ್ಮ ವಾಹನಗಳ ಒಡೆತನವನ್ನು ಸಾಭೀತುಪಡಿಸಿಕೊಂಡು ಸಮಂಜಾಯಿಷಿಯನ್ನು ನೀಡಿರುವುದಿಲ್ಲ. ಹಾಗೂ ವಾಹನಗಳ ಮಾಲೀಕತ್ವವನ್ನು ಕೋರಿ ಯಾವುದೇ ಅರ್ಜಿಯನ್ನು ಸಂಬಂಧ ಪಟ್ಟ ದಾಖಲಾತಿಗಳೊಂದಿಗೆ ಈ ಪ್ರಾಧಿಕಾರಕ್ಕೆ ಹಾಜರು ಪಡಿಸಿರುವುದಿಲ್ಲ. ಈ ಪ್ರಕರಣದಲ್ಲಿ ಆರೋಪಿತರಾಗಿರುವ ವ್ಯಕ್ತಿಗಳು ರೂಢಿಗತ ಆರೋಪಿತರಾಗಿರುವುದು ಹಾಗೂ ಜಪ್ತುಪಡಿಸಿಕೊಂಡ ವಾಹನಗಳ ಪೈಕಿ ಮೋಟಾರ್ ಸೈಕಲ್ ಸಂ:ಕೆಎ–19–ಯು–4452 ಇದಕ್ಕೆ ನಕಲಿ ನಂಬರ್ ಪ್ಲೇಟು ಅಳವಡಿಸಿ ಅಕ್ರಮ ಸಾಗಾಟಕ್ಕೆ ಬೆಂಗಾವಲಾಗಿ ಬಳಸಿಕೊಂಡಿರುವುದರಿಂದ, ಪ್ರಕರಣದಲ್ಲಿ ಆರೋಪಿತರಾಗಿರುವ ವ್ಯಕ್ತಿಗಳು ಸಾಮೂಹಿಕವಾಗಿ ಈ ಅಕ್ರಮದಲ್ಲಿ ಒಳಗೊಂಡು ವಾಹನಗಳ ಮಾಲೀಕರ ತಿಳುವಳಿಕೆಯಿಂದಲೇ ಶಾಮೀಲಾಗಿದ್ದು, ವಾಹನಗಳನ್ನು ಅಕ್ರಮ ಮದ್ಯಸಾರ ಸಾಗಾಣಿಕೆಗೆ ಬಳಸಿಕೊಂಡು ಶಿಕ್ಷೆಯಿಂದ ಪಾರಾಗುವ ಉದ್ದೇಶದಿಂದ ವಾಹನಗಳನ್ನು ಪಡೆಯಲು ಮತ್ತು ತಕ್ಷೀರನ್ನು ನಡೆಸಲು ಉತ್ಸುಕರಾಗಿಲ್ಲ ಎಂಬುದಾಗಿ ಈ ಪ್ರಾದಿಕಾರವು ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ. ಸದ್ರಿ ವಾಹನಗಳನ್ನು ನಕಲಿ ಸಾರಾಯಿ/ಮದ್ಯ ತಯಾರಿಸುವರೇ ಬಳಸಲು ಅಕ್ರಮವಾಗಿ ಮದ್ಯಸಾರವನ್ನು ಸಾಗಾಣಿಕೆ ಮಾಡುತ್ತಿರುವುದನ್ನು ಪೊಲೀಸ್ ಉಪ ನಿರೀಕ್ಷಕರು, ಬಂಟ್ವಾಳ ನಗರ ಪೊಲೀಸ್ ಠಾಣೆ ಇವರು ಪತ್ತೆ ಮಾಡಿ, ಸ್ಥಳ ಮಹಜರಿನ ಮೂಲಕ ಸಾಗಾಣಿಕೆಗೆ ಬಳಸಿದ ವಾಹನಗಳನ್ನು ಹಾಗೂ ಅಕ್ರಮ ಮದ್ಯಸಾರವನ್ನು ಜಪ್ತು ಪಡಿಸಿರುವುದು ಮತ್ತು ರಾಸಾಯನಿಕ ತಜ್ಞರ ಅಭಿಪ್ರಾಯದಂತೆ ಜಪ್ತು ಪಡಿಸಲಾದ ಪದಾರ್ಥವು ಮದ್ಯಸಾರವೆಂದು ದೃಢೀಕೃತವಾಗಿರುವುದು. ಇದು ಅಕ್ರಮವಾಗಿ ಮದ್ಯಸಾರವನ್ನು ವಾಹನಗಳಲ್ಲಿ ಕೇರಳ ರಾಜ್ಯಕ್ಕೆ ಸಾಗಾಟ ಮಾಡಿರುವುದು ಮೇಲಿನ ಎಲ್ಲಾ ದಾಖಲಾತಿಗಳಿಂದ ಮತ್ತು ಪ್ರಾದಿಕಾರದಲ್ಲಿ ನಡೆಸಲಾದ ಅಭಿಯೋಜಕ ಸಾಕ್ಷಿಗಳ ವಿಚಾರಣೆ ಅಂಶಗಳಿಂದ ಮೇಲ್ನೋಟಕ್ಕೆ ಸಾಭೀತಾಗಿರುತ್ತದೆ.

ಆದುದರಿಂದ ಸದ್ರಿ ವಾಹನಗಳನ್ನು ವಶಪಡಿಸಿಕೊಂಡು ಸುಮಾರು 11 ತಿಂಗಳಿಗಿಂತ ಹೆಚ್ಚು ಸಮಯ ಕಳೆದಿದ್ದು, ವಾಹನಗಳ ಆರ್.ಸಿ ಮಾಲೀಕರಿಗೆ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43ಬಿ ಪ್ರಕಾರ ಕಾರಣ ಕೇಳಿ ನೋಟಿಸುಗಳನ್ನು ನೀಡಿ ಕಾಲಾವಕಾಶ ನೀಡಿದ್ದರೂ ಅವರಾಗಲೀ ಅಥವಾ ಬೇರೆ ಯಾವ ವ್ಯಕ್ತಿಗಳಾಗಲೀ ಸೂಕ್ತ ದಾಖಲಾತಿಗಳೊಂದಿಗೆ ವಾಹನಗಳ ಮಾಲೀಕತ್ವ ವನ್ನು ತಿಳಿಸಿ ವಾಹನಗಳ ಬಿಡುಗಡೆ ಕೋರಿ ಈ ಪ್ರಾದಿಕಾರದ ಮುಂದೆ ಹಾಜರಾಗದೇ ಇರುವುದು ಹಾಗೂ ಪ್ರಕರಣದಲ್ಲಿ ಜಪ್ತುಪಡಿಸಿಕೊಂಡ ವಾಹನಗಳ ಪೈಕಿ ಮೋಟಾರ್ ಸೈಕಲ್‌ಗೆ ಕೆಎ–19–ಯು–4452 ಎಂಬ ನಕಲಿ ನಂಬರ್ ಪ್ಲೇಟನ್ನು ಅಳವಡಿಸಿ ಹಾಗೂ ಇತರೆ ಮೂರು ಲಾರಿಗಳಲ್ಲಿ ಅಕ್ರಮವಾಗಿ ತುಂಬಿದ್ದ ಪ್ಲಾಸ್ಟಿಕ್ ಕ್ಯಾನುಗಳಿದ್ದ ಮದ್ಯಸಾರವನ್ನು ಸಾಗಿಸಲು ಬೆಂಗಾವಲಿಗಾಗಿ ದಾರಿ ತೋರಿಸಲು ಉಪಯೋಗಿಸಿರುವುದು ಖಚಿತವಾಗಿರುವುದರಿಂದ, ಪ್ರಕರಣದಲ್ಲಿ ಜಪ್ತುಪಡಿಸಿಕೊಂಡ ಎಲ್ಲಾ ವಾಹನಗಳನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43 ಸಿ ಯಡಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವೆಂದು ಕಂಡುಬಂದ ಹಿನ್ನಲೆಯಲ್ಲಿ ಈ ಆದೇಶ.

**ಆದೇಶ**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ.ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲ0 43ಬಿ ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿದ ನಂತರ ಕಲಂ 43ಎ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪೊಲೀಸ್ ಉಪ ನಿರೀಕ್ಷಕರು, ಬಂಟ್ವಾಳ ನಗರ ಪೊಲೀಸ್ ಠಾಣೆ, ಬಂಟ್ವಾಳ ಇವರ ಕ್ರೈಂ ಸಂ:163 /2009, ದಿ: 20–8–2009 ರಲ್ಲಿ ಜಪ್ತು ಪಡಿಸಿಕೊಳ್ಳಲಾಗಿರುವ ಈ ಕೆಳಕಂಡ ನಾಲ್ಕು ವಾಹನಗಳನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43 ಸಿ ಯಡಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

1) ಸ್ವರಾಜ್ ಮಜ್ದಾ ಟೆಂಪೋ ನಂ: ಕೆಎ–19–4237– (ಚಾಸೀಸ್ ನಂ: ಎ93 WEL4 GM0025–ಇಂಜಿನ್ ನಂ:SLC3 J18044)

2) ಟಾಟಾ ಗೂಡ್ಸ ಲಾರಿ ನಂ:ಹೆಚ್‌ಆರ್–38–ಎಫ್–4904

3 ) ಟಾಟಾ 1109ಟರ್ಬೋಲಾರಿ ಸಂ: ಕೆಎ–20–ಎಎ–333 –(ಚಾಸೀಸ್ ನಂ:4163 02J WZ210427 ಇಂಜಿನ್ ನಂ:497TC85 JWZ116783 )

4) ಮೋಟಾರ್ ಬೈಕ್ ಸಂ:ಕೆಎ–19–ಯು–4452(ನಕಲಿ ನಂಬರ್ ಪ್ಲೇಟು)

ಈ ಆದೇಶವನ್ನು ದಿನಾಂಕ:27–07–2010ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜ್ಯಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–I**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:–**

ಪ್ರಾ.ಸಾ–1 : ಶ್ರೀ .ವಿವೇಕಾನಂದ, ಪೊಲೀಸ್ ಉಪ ನಿರೀಕ್ಷಕರು
ಬಂಟ್ವಾಳ ನಗರ ಪೊಲೀಸ್ ಠಾಣೆ,ಬಂಟ್ವಾಳ

ಪ್ರಾ.ಸಾ–2 : ಶ್ರೀ .ಕೆ.ಕುಶಾಲಪ್ಪ ಗೌಡ, ಹೆಚ್.ಸಿ.1012
ಬಂಟ್ವಾಳ ನಗರ ಪೊಲೀಸ್ ಠಾಣೆ,ಬಂಟ್ವಾಳ

ಪ್ರಾ.ಸಾ–3 : ಶ್ರೀ .ಸಾಂತಪ್ಪ ಗೌಡ,ಸಹಾಯಕ ಪೊಲೀಸ್ ಉಪ ನಿರೀಕ್ಷಕರು
ಬಂಟ್ವಾಳ ನಗರ ಪೊಲೀಸ್ ಠಾಣೆ,ಬಂಟ್ವಾಳ

ಪ್ರಾ.ಸಾ–4 : ಶ್ರೀ .ಕಮಲಾಕ್ಷ ಬಲ್ಯಾಯ,ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ,ಬಂಟ್ವಾಳ

**ಅನುಬಂಧ– II**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:–**

| | | |
|---|---|---|
| ನಿಶಾನೆ ಪಿ– I | : | ಮಹಜರು ಪ್ರತಿ |
| ನಿಶಾನೆ ಪಿ– I ಎ,ಬಿ,ಸಿ | : | ಅದರ ಮೇಲಿನ ಸಾಕ್ಷಿ ಸಹಿ |
| ನಿಶಾನೆ ಪಿ–2 | : | ಫಿರ್ಯಾದುದಾರರ ಪತ್ರ ದಿ:5–9–2009 |
| ನಿಶಾನೆ ಪಿ–2ಎ | : | ಅದರ ಮೇಲಿನ ಸಾಕ್ಷಿ ಸಹಿ |
| ನಿಶಾನೆ ಪಿ–3 | : | ತನಿಖಾದಿಕಾರಿಗಳ ದಿ:20–3 –2010ರ ಪತ್ರ |
| ನಿಶಾನೆ ಪಿ–4 | : | ರಾಸಾಯನಿಕ ವಿಶ್ಲೇಷಣೆ ವರದಿ |
| ನಿಶಾನೆ ಪಿ–5 | : | ತನಿಖಾದಿಕಾರಿಗಳ ದಿ:3 –5–2010ರ ಪತ್ರ |
| ನಿಶಾನೆ ಪಿ–6 | : | ತನಿಖಾದಿಕಾರಿಗಳ ದಿ:16–6–2010ರ ಪತ್ರ |
| ನಿಶಾನೆ ಪಿ–7 | : | ತನಿಖಾದಿಕಾರಿಗಳಿಂದ ಸಾರಿಗೆ ಅಧಿಕಾರಿಗಳಿಗೆ ಬರೆದ ಪತ್ರ |
| ನಿಶಾನೆ ಪಿ–7ಎ | : | ಅದರ ಮೇಲಿನ ಸಾಕ್ಷಿ ಸಹಿ |
| ನಿಶಾನೆ ಪಿ–8 | : | ತನಿಖಾ ವರದಿ ದಿ:2–6–2010 |

**ಅನುಬಂಧ– III**

ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು :– –ಯಾರು ಇಲ್ಲ–

**ಅನುಬಂಧ–IV**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು :– –ಯಾವುದು ಇಲ್ಲ–

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.1266

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ,**
**ಮಂಗಳೂರು ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಎಸ್‌ಡಿಕೆ/90/ಡಿಟಿಸಿಆರ್/2007-08 ದಿನಾಂಕ:31-07-2010**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್
ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**
ಪೊಲೀಸ್ ಉಪ ನಿರೀಕ್ಷಕರು,
ಪುತ್ತೂರು ಗ್ರಾಮಾಂತರ ಪೊಲೀಸ್ ಠಾಣೆ, ಪುತ್ತೂರು.

**ಆರೋಪಿ:**
ಸಂಜೀವ, ಬಿನ್:ಶೇಖರ ಗೌಡ,
ಪಾವಾರಿಪಲ್ಲ ಮನೆ,
ಪೆಟ್ರಮೆ ಗ್ರಾಮ ಮತ್ತು ಅಂಚೆ, ಬೆಳ್ತಂಗಡಿ.

**ವಾಹನ ಮಾಲೀಕರು:**
ಶ್ರೀ.ಪಿ.ಕೊರಗಪ್ಪ ಶೆಟ್ಟಿ, ಬಿನ್:ಈಶ್ವರ ಶೆಟ್ಟಿ,
ಪರ್ತಿಮಾರು ಹೌಸ್, ಪೆಟ್ರಮೆ ಗ್ರಾಮ ಮತ್ತು ಅಂಚೆ, ಬೆಳ್ತಂಗಡಿ.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:18-04-2008 ರಂದು ಸಂಜೆ 4-3 0 ಗಂಟೆ ಸಮಯಕ್ಕೆ ಫಿರ್ಯಾದುದಾರರು ತನ್ನ ಸಿಬ್ಬಂದಿಯವರೊಂದಿಗೆ ಪುತ್ತೂರು ತಾಲೂಕು ಕೌಕ್ರಾಡಿ ಗ್ರಾಮದ ಪೆರಿಯಶಾಂತಿ ಕ್ರಾಸ್ ರಸ್ತೆಯ ಜಂಕ್ಷನ್‌ನಲ್ಲಿ ಮೊದಲೇ ದೊರೆತ ಖಚಿತ ವರ್ತಮಾನದ ಮೇರೆಗೆ ವಾಹನಗಳನ್ನು ತಪಾಸಣೆ ಮಾಡುತ್ತಿರುವಾಗ,

ನೆಲ್ಯಾಡಿ ಕಡೆಯಿಂದ ಕೊಕ್ಕಡ ಕಡೆಗೆ ಬರುತ್ತಿದ್ದ ಜೀಪ್ ಸಂಖ್ಯೆ: ಕೆಎ–12–ಎನ್–8877 ನ್ನು ನಿಲ್ಲಿಸಲು ಸೂಚನೆ ನೀಡಿದ್ದು, ಅದರ ಚಾಲಕ ರಸ್ತೆಯ ಬದಿಯಲ್ಲಿ ನಿಲ್ಲಿಸಿದಾಗ ಜೀಪಿನಲ್ಲಿ ಚಾಲಕ ಮಾತ್ರವಿದ್ದು, ಜೀಪಿನ ಹಿಂಬದಿಯಲ್ಲಿ 2 ರಟ್ಟಿನ ಪೆಟ್ಟಿಗೆಗಳಿರುವುದು ಕಂಡು ಬಂತು. ಪಂಚರ ಹಾಗೂ ಸಿಬ್ಬಂದಿಯವರ ಸಮಕ್ಷಮ ರಟ್ಟಿನ ಪೆಟ್ಟಿಗೆಗಳನ್ನು ತೆರೆದು ನೋಡಲಾಗಿ, ಒಂದು ರಟ್ಟಿನ ಪೆಟ್ಟಿಗೆಯಲ್ಲಿ 180 ಎಂ.ಎಲ್. ಮದ್ಯ ತುಂಬಿರುವ ಒಟ್ಟು 48 ಬಾಟಲ್‌ಗಳಿದ್ದು, ಸದರಿ ಬಾಟಲ್‌ಗಳ ಮೇಲೆ ಕ್ಲಬ್ ಚಾಯ್ಸ್ ಫೈನ್ ವಿಸ್ಕಿ ಎಂಬ ಲೇಬಲ್ ಅಂಟಿಸಿರುತ್ತಾರೆ. ಇನ್ನೊಂದು ರಟ್ಟಿನ ಪೆಟ್ಟಿಗೆಯಲ್ಲಿ 180 ಎಂ.ಎಲ್.ನ ಮದ್ಯ ತುಂಬಿರುವ ಒಟ್ಟು 48 ಸೀಸೆಗಳಲ್ಲಿ ಕೂಡಾ ಕ್ಲಬ್ ಚಾಯ್ಸ್ ಫೈನ್ ವಿಸ್ಕಿ ಎಂಬ ಲೇಬಲ್‌ಗಳನ್ನು ಸಹ ಅಂಟಿಸಿರುತ್ತಾರೆ. ಸದರಿ ಮದ್ಯದ ಸೀಸೆಗಳನ್ನು ಸಾಗಾಟ ಮಾಡಲು ರಹದಾರಿ ಅಥವಾ ಬಿಲ್ಲುಗಳನ್ನು ಹಾಜರುಪಡಿಸಲು ಚಾಲಕನಲ್ಲಿ ವಿಚಾರಿಸಿದಾಗ, ಆತನ ಬಳಿ ಯಾವುದೇ ದಾಖಲಾತಿಗಳು ಇರುವುದಿಲ್ಲವೆಂದು ತಿಳಿಸಿರುತ್ತಾನೆ. ನಂತರ ಚಾಲಕನ ಹೆಸರು ಮತ್ತು ವಿಳಾಸವನ್ನು ವಿಚಾರಿಸಿದಾಗ ತನ್ನ ಹೆಸರು ಸಂಜೀವ,ಬಿನ್:ಶೇಖರ ಗೌಡ, ಪಾವಾರಿಪಲ್ಲ ಮನೆ,ಪೆಟ್ರಮೆ ಗ್ರಾಮ ಮತ್ತು ಅಂಚೆ, ಬೆಳ್ತಂಗಡಿ ಎಂಬುವುದಾಗಿ ತಿಳಿಸಿದನು. ಅಲ್ಲದೆ ಸದರಿ ಮದ್ಯದ ಸೀಸೆಗಳ ಬಗ್ಗೆ ವಿಚಾರಿಸಲಾಗಿ, ಸದರಿ ಮದ್ಯವನ್ನು ನೆಲ್ಯಾಡಿಯ ಕ್ಲಾಸಿಕ್ ಬಾರ್‌ನಿಂದ ಖರೀದಿಸಿ ಹೆಚ್ಚಿನ ಬೆಲೆಗೆ ಮಾರಾಟ ಮಾಡಲೆಂದು ಸಾಗಾಟ ಮಾಡಿರುವುದಾಗಿ ತಿಳಿಸಿದನು.

ಸದರಿ 2 ರಟ್ಟಿನ ಪೆಟ್ಟಿಗೆಗಳಿಂದ ತಲಾ 4 ಬಾಟಲ್‌ಗಳನ್ನು ಮಾದರಿಗಾಗಿ ತೆಗೆದಿರಿಸಿ, ಇವುಗಳ ಮುಚ್ಚಳಕ್ಕೆ ಬಿಳಿ ಬಟ್ಟೆ ಸುತ್ತಿ ಅರಗಿನಿಂದ ಎಸ್.ಹೆಚ್.ಓ. ಸೀಲ್ ಮಾಡಿ ಹಾಗೂ ಪಂಚರ ಸಹಿ ಇರುವ ಚೀಟಿ ಅಂಟಿಸಲಾಯಿತು. ಸದರಿ ಮದ್ಯವನ್ನು ಸಾಗಾಟ ಮಾಡುತ್ತಿದ್ದ ಜೀಪನ್ನು ಪರಿಶೀಲಿಸಲಾಗಿ, ಇದು ಟೂರಿಸ್ಟ್ ಜೀಪ್ ಆಗಿದ್ದು, ಇದರ ನೋಂದಣಿ ಸಂಖ್ಯೆ: ಕೆಎ–12–ಎನ್–8877 ಆಗಿರುತ್ತದೆ. ಇದು ಕರ್ನಾಟಕ ಅಬಕಾರಿ ಕಾಯಿದೆ ಕಲಂ 14, 15, 3 4 ಮತ್ತು 43 (ಎ) ಪ್ರಕಾರ ಅಪರಾಧ ಹಾಗೂ ಶಿಕ್ಷಾರ್ಹವಾಗಿರುವುದರಿಂದ, ಅಕ್ರಮ ಮದ್ಯ ಹಾಗೂ ಸಾಗಾಟಕ್ಕೆ ಬಳಸಿದ ಜೀಪನ್ನು ಇಲಾಖಾ ವಶಕ್ಕೆ ತೆಗೆದುಕೊಂಡು ಚಾಲಕನನ್ನು ಸ್ಥಳದಲ್ಲಿಯೇ ದಸ್ತಗಿರಿ ಮಾಡಿ ಮಹಜರನ್ನು ಪಂಚರ ಹಾಗೂ ಸಿಬ್ಬಂದಿಯವರ ಸಮಕ್ಷಮ ಸ್ಥಳದಲ್ಲಿಯೇ ತಯಾರಿಸಿ ಮಹಜರಿಗೆ ಸಹಿಯನ್ನು ಪಡೆದು, ಮಹಜರಿನಲ್ಲಿ ಸ್ಥಳಚೆಕ್ ಬಂದಿ ಹಾಗೂ ದಿನಾಂಕ ಮತ್ತು ಸಮಯವನ್ನು ನಮೂದಿಸಿ, ಆರೋಪಿಯ ವಿರುದ್ಧ ತಕ್ಷೀರು ಸಂಖ್ಯೆ: 65/2008 ದಿ:18-4-2008 ರಂದು ಪ್ರಕರಣವನ್ನು ದಾಖಲಿಸಿ, ಸದರಿ ವರದಿಯನ್ನು ಮೇಲಾಧಿಕಾರಿಯವರಿಗೆ ಹಾಗೂ ಮಾನ್ಯ ನ್ಯಾಯಾಲಯಕ್ಕೆ ಮತ್ತು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಪೊಲೀಸ್ ಉಪ ನಿರೀಕ್ಷಕರು, ಪುತ್ತೂರು ಗ್ರಾಮಾಂತರ ಪೊಲೀಸ್ ಠಾಣೆ, ಉಪ್ಪಿನಂಗಡಿ ಇವರ ಪತ್ರ ಸಂಖ್ಯೆ ದಿ:20-4-2008 ರಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಸೊತ್ತುಗಳನ್ನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43 (ಎ) ರಡಿ ಮುಟ್ಟುಗೋಲು ಪ್ರಕ್ರಿಯೆ ನಡೆಸುವ ಬಗ್ಗೆ ಸದರಿ ಸೊತ್ತುಗಳನ್ನು ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ, ಪುತ್ತೂರು ಇವರಿಗೆ ಹಸ್ತಾಂತರಿಸಲು ಅನುಮತಿ ಆದೇಶ ನೀಡಬೇಕೆಂದು ಕೋರಿರುವ ಮೇರೆಗೆ ಈ ಪ್ರಾಧಿಕಾರದ ಆದೇಶ ಸಂಖ್ಯೆ: ಎಸ್‌ಡಿಕೆ/ಸಿಆರ್‌ಎಂ/4/2008-09 ದಿ:2-5-2008 ರ ಆದೇಶದಲ್ಲಿ, ತಕ್ಷೀರಿನಲ್ಲಿ ವಶಪಡಿಸಿಕೊಂಡ ಸೊತ್ತುಗಳನ್ನು ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ, ಪುತ್ತೂರು ಇವರಿಗೆ ಹಸ್ತಾಂತರಿಸಲು ಹಾಗೂ ಪ್ರಕರಣದ ತನಿಖೆಯನ್ನು ಪೊಲೀಸ್ ಉಪ ನಿರೀಕ್ಷಕರು, ಪುತ್ತೂರು ಗ್ರಾಮಾಂತರ ಪೊಲೀಸ್ ಠಾಣೆ, ಉಪ್ಪಿನಂಗಡಿ ಇವರು ಮುಂದುವರಿಸಿ ಆರೋಪಿಗಳ ವಿರುದ್ಧ ದೋಷಾರೋಪಣ ಪಟ್ಟಿಯನ್ನು ಘನ ನ್ಯಾಯಾಲಯದಲ್ಲಿ ಸಲ್ಲಿಸಲು ಅನುಮತಿ ನೀಡಿದೆ.

ತಕ್ಷೀರಿನಲ್ಲಿ ವಶಪಡಿಸಿಕೊಂಡ ಜೀಪ್ ಸಂಖ್ಯೆ: ಕೆಎ–12–ಎನ್–8877 ರ ಆರ್.ಸಿ. ಮಾಲೀಕರಾದ ಶ್ರೀ.ಪಿ.ಕೊರಗಪ್ಪ ಶೆಟ್ಟಿ, ಬಿನ್:ಈಶ್ವರ ಶೆಟ್ಟಿ, ಪರ್ತಿಮಾರು ಹೌಸ್, ಪೆಟ್ರಮೆ ಗ್ರಾಮ ಮತ್ತು ಅಂಚೆ, ಬೆಳ್ತಂಗಡಿ ಇವರು ತಮ್ಮ ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ದಿ:24-4-2008 ರಂದು ವಾಹನದ ಆರ್.ಸಿ. ಪುಸ್ತಕದೊಂದಿಗೆ ಅರ್ಜಿ ಸಲ್ಲಿಸಿ, ಸದರಿ ಅರ್ಜಿಯಲ್ಲಿ, ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನ ಅಕ್ರಮ ಮದ್ಯ ಸಾಗಾಣಿಕೆಯಲ್ಲಿ ಭಾಗಿಯಾಗಿರುವುದಿಲ್ಲ. ತಮ್ಮ ವಾಹನದ ಮೇಲೆ ಸುಳ್ಳು ಮೊಕದ್ದಮೆಯನ್ನು ದಾಖಲಿಸಿ ಸದರಿ ಜೀಪನ್ನು ವಶಪಡಿಸಿಕೊಂಡಿರುತ್ತಾರೆ. ತಕ್ಷೀರಿನಲ್ಲಿ ವಶಪಡಿಸಿಕೊಂಡ ಜೀಪ್‌ನ್ನು ತನಗೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಬೇಕೆಂದು ಕೋರಿರುತ್ತಾರೆ.

ಸದರಿ ವಾಹನ ಮಾಲೀಕರ ಅರ್ಜಿಯನ್ನು ಪರಿಶೀಲಿಸಿ ಈ ಪ್ರಾಧಿಕಾರವು ವಾಹನದ ಮೌಲ್ಯವನ್ನು ನಿರ್ಧರಿಸುವ ಸಲುವಾಗಿ ಪ್ರಾದೇಶಿಕ ಸಾರಿಗೆ ಅಧಿಕಾರಿ, ಪುತ್ತೂರು ಇವರಿಗೆ ದಿ:12-5-2008 ರಂದು ಪತ್ರ ಬರೆಯಲಾಗಿದ್ದು, ಸದರಿ ಪತ್ರಕ್ಕೆ ಅನುಸಾರವಾಗಿ ಪ್ರಾದೇಶಿಕ ಸಾರಿಗೆ ಅಧಿಕಾರಿ, ಪುತ್ತೂರು, ದ.ಕ.ಜಿಲ್ಲೆ ಇವರ ಮೌಲ್ಯಮಾಪನ ದೃಢೀಕರಣ ಪತ್ರ ದಿ:14-5-2008 ರಂದು ಸದರಿ ವಾಹನದ ಪ್ರಸ್ತುತ ಮಾರುಕಟ್ಟೆಯ ಅಂದಾಜು ಮೌಲ್ಯ ರೂ.51,250/– ಎಂದು ಅಂದಾಜಿಸಿ ದೃಢೀಕರಣ ಪತ್ರ ನೀಡಿರುತ್ತಾರೆ. ಈ ಪ್ರಾಧಿಕಾರದ ನೋಟೀಸು ಸಂಖ್ಯೆ: ಎಸ್‌ಡಿಕೆ/ಸಿಆರ್‌ಎಂ/65/2007-08 ದಿ:26-5-2008 ರಂದು ವಾಹನ ಮಾಲೀಕರಾದ ಶ್ರೀ.ಪಿ.ಕೊರಗಪ್ಪ ಶೆಟ್ಟಿ ಇವರಿಗೆ ವಾಹನದ ಮೌಲ್ಯಮಾಪನ ಮೊತ್ತ ರೂ.51,250/– ಕ್ಕೆ ಸಮಾನವಾದ ಬ್ಯಾಂಕ್ ಗ್ಯಾರಂಟಿಯನ್ನು ಯಾವುದೇ ರಾಷ್ಟ್ರೀಕೃತ ಬ್ಯಾಂಕ್‌ಶಾಖೆಯಿಂದ ಈ ಪ್ರಾಧಿಕಾರದ ಪರ ಪಡೆದು ಒಪ್ಪಿಸಲು ನೋಟೀಸು ನೀಡಲಾಗಿರುತ್ತದೆ. ಸದರಿ ನೋಟೀಸಿಗೆ ಅನುಗುಣವಾಗಿ ವಾಹನ ಮಾಲೀಕರು ದಿ:4-6-2008 ರಂದು ಈ ಪ್ರಾಧಿಕಾರಕ್ಕೆ ಸಿಂಡಿಕೇಟ್ ಬ್ಯಾಂಕ್, ಕೊಕ್ಕಡ ಶಾಖೆ, ಬೆಳ್ತಂಗಡಿ ತಾಲೂಕು ಇವರಿಂದ ರೂ.51,250/– ರ ಮೌಲ್ಯಕ್ಕೆ ಸಮಾನವಾದ ಬ್ಯಾಂಕ್ ಭದ್ರತೆ ಸಂಖ್ಯೆ ದಿ:3 -6-2008 ರಂತೆ ಭದ್ರತಾ ಪತ್ರವನ್ನು ಒಪ್ಪಿಸಿ, ಅಷ್ಟೇ ಮೊತ್ತಕ್ಕೆ ಇಬ್ಬರು ಜಾಮೀನುದಾರರಾದ ಶ್ರೀ.ಪಿ.ಕೊರಗಪ್ಪ ಶೆಟ್ಟಿ ಹಾಗೂ ಶ್ರೀ.ನೀಲಯ್ಯ ಗೌಡ ಇವರಿಂದ ಸದರಿ ಮೊತ್ತಕ್ಕೆ ಬಾಂಡ್ ಪತ್ರ ಮತ್ತು ಸದರಿ ವ್ಯಕ್ತಿಗಳಿಂದ ಅಫಿಡಾವಿತ್‌ಗಳನ್ನು ಹಾಜರುಪಡಿಸಿರುತ್ತಾರೆ.

ವಾಹನದ ಮಾಲೀಕರು ತಕ್ಷೀರಿನಲ್ಲಿ ವಶಪಡಿಸಿಕೊಂಡ ಜೀಪ್ ಸಂಖ್ಯೆ: ಕೆಎ–12–ಎನ್–8877 ರ ಮೌಲ್ಯಮಾಪನಕ್ಕೆ ಅನುಗುಣವಾಗಿ ಬ್ಯಾಂಕ್ ಭದ್ರತೆ ಹಾಗೂ ಅಷ್ಟೇ ಮೊತ್ತಕ್ಕೆ ಸಮಾನವಾದ ಇಬ್ಬರು ಜಾಮೀನುದಾರರನ್ನು ನೀಡಿರುವುದರಿಂದ, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ.ಜಿಲ್ಲೆ, ಮಂಗಳೂರು ಇವರ ಮಧ್ಯಂತರ ಆದೇಶ ಸಂಖ್ಯೆ: ಎಸ್‌ಡಿಕೆ/ಸಿಆರ್‌ಎಂ/65/2007-08 ದಿ:4-6-2008 ರಂದು ತಕ್ಷೀರಿನಲ್ಲಿ ವಶಪಡಿಸಿಕೊಂಡ ಜೀಪನ್ನು ಅದರ ನೋಂದಣಿ ಮಾಲೀಕರಾದ ಶ್ರೀ.ಪಿ.ಕೊರಗಪ್ಪ ಶೆಟ್ಟಿ, ಬೆಳ್ತಂಗಡಿ ತಾಲೂಕು ಇವರಿಗೆ ಕೆಲವು ಷರತ್ತುಗಳನ್ವಯ ಜೀಪನ್ನು ಮಧ್ಯಂತರ ಸುಪರ್ಧಿಗೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಲಾಗಿರುತ್ತದೆ.

ವಾಹನದ ಮಾಲೀಕರಿಗೆ ಮತ್ತು ಆರೋಪಿಗೆ ಈ ಪ್ರಾಧಿಕಾರದಿಂದ ದಿ: 5-11-2008 ರಂದು ಕರ್ನಾಟಕ ಅಬಕಾರಿ ಕಾಯಿದೆ ಕಲಂ 1965 ರ ಸೆಕ್ಷನ್ 43 (ಬಿ) ಪ್ರಕಾರ ಕಾರಣ ಕೇಳಿ ನೋಟೀಸುಗಳನ್ನು ನೋಂದಣಿ ಅಂಚೆ ಮೂಲಕ ನೀಡಲಾಗಿದ್ದು, ಸದರಿ ಕಾರಣ ಕೇಳಿ ನೋಟೀಸಿಗೆ ವಾಹನ ಮಾಲೀಕರು ಅವರ ವಕೀಲರ ಮುಖಾಂತರ ದಿ:17-11-2008 ರಂದು ಉತ್ತರವನ್ನು ಸಲ್ಲಿಸಿರುತ್ತಾರೆ.

ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ, ಪುತ್ತೂರು ಇವರ ತನಿಖಾ ವರದಿ ಸಂಖ್ಯೆ: ಆರ್‌ಸಿಆರ್/11/2008-09 ದಿ:2-7-2009 ರ ವರದಿಯಲ್ಲಿ, ತಕ್ಷೀರಿನಲ್ಲಿ ವಶಪಡಿಸಿಕೊಂಡ ಮದ್ಯದ ಸ್ಯಾಂಪಲ್‌ಗಳನ್ನು ಸಹಾಯಕ ಪೊಲೀಸ್ ಅಧೀಕ್ಷಕರು, ಪುತ್ತೂರು ಉಪ ವಿಭಾಗ, ಪುತ್ತೂರು ಇವರು ರಾಸಾಯನಿಕ ವಿಶ್ಲೇಷಣೆಗೆ ಕಳುಹಿಸಲಾಗಿದ್ದು, ಇವರು ಸಲ್ಲಿಸಿದ ರಾಸಾಯನಿಕ ವಿಶ್ಲೇಷಣಾ ವರದಿ ಸಂಖ್ಯೆ: ಇ–250-8 ದಿ:13 -6-2008 ರ ವರದಿಯಲ್ಲಿ, ಮದ್ಯದ ಮದ್ಯಸಾರ ಪ್ರಮಾಣ ಶೇ.42 ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ. ತಕ್ಷೀರಿನಲ್ಲಿ ವಶಪಡಿಸಿಕೊಂಡ ಮದ್ಯವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಆದೇಶ ನೀಡಬೇಕೆಂದು ಶಿಫಾರಸ್ಸು ಮಾಡಿರುವ ಮೇರೆಗೆ ಈ ಪ್ರಾಧಿಕಾರವು ಅಬಕಾರಿ ನಿರೀಕ್ಷಕರ ತನಿಖಾ ವರದಿಯನ್ನು ಆಧರಿಸಿ, ತಕ್ಷೀರಿನಲ್ಲಿ ವಶಪಡಿಸಿಕೊಂಡ ಮದ್ಯದ ಸೊತ್ತುಗಳಿಗೆ ಸ್ವಾಧೀನಪಡಿಸಿಕೊಳ್ಳುವ ಬಗ್ಗೆ ಈ ಪ್ರಾಧಿಕಾರದಲ್ಲಿ ಯಾರೊಬ್ಬರೂ ಬೇಡಿಕೆ ಅರ್ಜಿ ಸಲ್ಲಿಸದೇ ಇರುವುದು ಹಾಗೂ ಯಾರೂ ವಾರೀಸುದಾರರು ಮುಂದೆ ಬಂದು, ಸದರಿ ಸೊತ್ತುಗಳು ತಮ್ಮದೆಂದು ತಿಳಿಸಿ ಬಿಡುಗಡೆ ಅರ್ಜಿ ಸಲ್ಲಿಸದೇ ಇರುವ ಕಾರಣಕ್ಕೆ ಪ್ರಕರಣದಲ್ಲಿ ಜಪ್ತಾದ ಸೊತ್ತುಗಳ ಪೈಕಿ ಜೀಪ್ ಸಂಖ್ಯೆ: ಕೆಎ–12–ಎನ್–8877 ನ್ನು ಹೊರತುಪಡಿಸಿ, ತಕ್ಷೀರಿನಲ್ಲಿ ವಶಪಡಿಸಿಕೊಂಡ 17-280 ಲೀಟರ್ ಮದ್ಯದಲ್ಲಿ ರಾಸಾಯನಿಕ ಸ್ಯಾಂಪಲ್‌ಗಳನ್ನು ಹೊರತುಪಡಿಸಿ, ಉಳಿದ ಮದ್ಯವನ್ನು ಈ ಪ್ರಾಧಿಕಾರದ ಆದೇಶ ಸಂಖ್ಯೆ: ಎಸ್‌ಡಿಕೆ/90/ ಡಿಟಿಸಿಆರ್/2008-09 ದಿ:8-7-2009 ರಂತೆ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಆದೇಶ ನೀಡಲಾಗಿರುತ್ತದೆ.

ಅರ್ಜಿದಾರರು ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸುವ ಸಂದರ್ಭದಲ್ಲಿ ಈ ಪ್ರಾಧಿಕಾರಕ್ಕೆ ನೀಡಿರುವ ಬ್ಯಾಂಕ್ ಗ್ಯಾರಂಟಿ ಅವಧಿ ದಿ:25-5-2010 ಕ್ಕೆ ಅಂತ್ಯಗೊಳ್ಳುವುದರಿಂದ, ಬ್ಯಾಂಕ್ ಗ್ಯಾರಂಟಿ ಮೊತ್ತ ರೂ.51,250/– ನ್ನು ಕಂದಾಯ ಇಲಾಖಾ ಲೆಕ್ಕ ಶೀರ್ಷಿಕೆ ಸಂಖ್ಯೆ: 8443 -00-101-0-01 ರಲ್ಲಿ ಚಲನ್ ಸಂ:462 ದಿ:10-5-2010 ರಂದು ಜಮೆ ಮಾಡಲಾಗಿದೆ.

ನಂತರ ಪ್ರಕರಣದ ವಿಚಾರಣೆಯನ್ನು ಆರಂಭಿಸಿ, ಈ ಪ್ರಕರಣದಲ್ಲಿ ಈ ಕೆಳಗಿನಂತೆ ವಿವಾದಾಂಶಗಳು ಉದ್ಭವಿಸುತ್ತದೆ.

**1) ಮೊದಲನೇ ವಿವಾದಾಂಶ:** ದಿ:18-04-2008 ರಂದು ಜೀಪ್ ಸಂಖ್ಯೆ: ಕೆಎ–12–ಎನ್–8877 ರಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿದೆಯೇ? ಮತ್ತು ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ ಮತ್ತು ನಿಯಮಗಳ ರೀತ್ಯಾ ಉಲ್ಲಂಘನೆಗೆ ಬಳಸಲಾಗಿದೆಯೇ?

**2) ಎರಡನೇ ವಿವಾದಾಂಶ:** ಸದರಿ ವಾಹನದಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿರುವುದರ ಬಗ್ಗೆ ವಾಹನ ಮಾಲೀಕರಿಗೆ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೆ ನಡೆದಿದೆ ಹಾಗೂ ಇದರ ಬಗ್ಗೆ ಅವರು ಸಾಕಷ್ಟು ಮುಂಜಾಗ್ರತ ಕ್ರಮವನ್ನು ಕೈಗೊಳ್ಳಲಾಗಿತ್ತು ಎಂಬ ಅಂಶವನ್ನು ಆರೋಪಿಗಳು ಮತ್ತು ವಾಹನ ಮಾಲೀಕರು ಈ ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲವೇ?

**3) ಮೂರನೇ ವಿವಾದಾಂಶ:** ಜಪ್ತುಪಡಿಸಲಾದ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ಅಥವಾ ಇಲ್ಲವೇ?

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ: 1**

ಪ್ರಾಸಿಕ್ಯೂಶನ್ ಪರ ಪ್ರಕರಣದ ಫಿರ್ಯಾದುದಾರರಾದ ಶ್ರೀ.ಚಂದ್ರಶೇಖರಯ್ಯ, ಸಹಾಯಕ ಪೊಲೀಸ್ ನಿರೀಕ್ಷಕರು, ಬೆಳ್ತಂಗಡಿ ಇವರು ದಿ:30-3-2010 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಎ.ಡಿ.ಪಿ.ಯವರ ಮುಖ್ಯ ವಿಚಾರಣೆಗೆ ಉತ್ತರವನ್ನು ನೀಡುತ್ತಾ, ತಾನು ದಿ:18-4-2008 ರಂದು ತನ್ನ ಸಿಬ್ಬಂದಿಗಳೊಂದಿಗೆ ಖಾಸಗಿ ಜೀಪಿನಲ್ಲಿ ಗಸ್ತು ಕರ್ತವ್ಯದಲ್ಲಿದ್ದು, ಆ ಸಮಯದಲ್ಲಿ ಖಚಿತ ವರ್ತಮಾನದ ಮೇರೆಗೆ ಸಂಜೆ 4-00 ಗಂಟೆಯಿಂದ ಕೌಕ್ರಾಡಿ ಗ್ರಾಮದ ಪೆರಿಯಶಾಂತಿ ಕ್ರಾಸ್ ರಸ್ತೆಯಲ್ಲಿ ಕಾಯುತ್ತಿದ್ದು, 4-3 0 ಗಂಟೆಗೆ ನೆಲ್ಯಾಡಿ ಕಡೆಯಿಂದ ಕೊಕ್ಕಡ ಪಟ್ರಮೆ ಕಡೆಗೆ ಹೋಗುವ ರಸ್ತೆಯಲ್ಲಿ ಜೀಪ್ ಸಂಖ್ಯೆ: ಕೆಎ–12–ಎನ್–8877 ಕಂಡು ಬಂದಿದ್ದು, ಜೀಪಿನಲ್ಲಿ ಚಾಲಕ ಮಾತ್ರವಿದ್ದು, ಸದರಿ ಜೀಪಿನ ಹಿಂಬದಿಯಲ್ಲಿ ಎರಡು ರಟ್ಟಿನ ಪೆಟ್ಟಿಗೆಗಳಿದ್ದು, ಅದನ್ನು ಪಂಚರ ಸಮಕ್ಷಮ ತೆರೆದು ನೋಡಲಾಗಿ, ಸದರಿ ಎರಡು ಪೆಟ್ಟಿಗೆಗಳಲ್ಲಿ ತಲಾ 48 ರಂತೆ 180 ಎಂ.ಎಲ್.ನ ಮದ್ಯ ತುಂಬಿದ ವಿಸ್ಕಿ ಎಂಬ ಲೇಬಲ್ ಬಾಟಲ್‌ಗಳಿರುವುದು ಕಂಡು ಬಂತು. ಚಾಲಕನ ಹೆಸರು ಮತ್ತು ವಿಳಾಸವನ್ನು ವಿಚಾರಿಸಿದಾಗ, ಆತನ ಹೆಸರು ಸಂಜೀವ ಎಂದು, ಸದರಿ ಮದ್ಯವನ್ನು ಸಾಗಾಟ ಮಾಡಲು ಪರವಾನಿಗೆ ಇದೆಯೇ ಎಂದು ವಿಚಾರಿಸಿದಾಗ, ಆತನು ಯಾವುದೇ ಪರವಾನಿಗೆ ಇಲ್ಲವೆಂದು ತಿಳಿಸಿದನು. ಸದರಿ ಪೆಟ್ಟಿಗೆಗಳಿಂದ ರಾಸಾಯನಿಕ ಪರೀಕ್ಷೆಗಾಗಿ 4 ಬಾಟಲ್‌ಗಳನ್ನು ಮಾದರಿಗಾಗಿ ತೆಗೆದು ಮೊಹರು ಕ್ರಮ ಜರುಗಿಸಲಾಯಿತು. ಎರಡು ಪೆಟ್ಟಿಗೆಗಳಲ್ಲಿ ಒಟ್ಟು 96 ಮದ್ಯದ ಬಾಟಲ್‌ಗಳಿರುವುದು ಕಂಡು ಬಂತು. ಸಾಗಾಟಕ್ಕೆ ಬಳಸಿದ ಜೀಪ್ ಹಾಗೂ ಮದ್ಯ ತುಂಬಿದ ಎಲ್ಲಾ ಬಾಟಲ್‌ಗಳನ್ನು ಆರೋಪಿ ಚಾಲಕ ಸಮೇತ ವಶಕ್ಕೆ ತೆಗೆದುಕೊಂಡು ಸ್ಥಳದಲ್ಲಿಯೇ ಮಹಜರು ತಯಾರಿಸಿ, ಮಹಜರನ್ನು ನಿಶಾನೆ ಪಿ–1 ಎಂದು, ಅದರಲ್ಲಿರುವ ತನ್ನ ಸಹಿಯನ್ನು ನಿಸಾನೆ ಪಿ–1ಎ ಎಂದು ಗುರುತಿಸಲಾಯಿತು. ಸದರಿ ಸೊತ್ತು ಹಾಗೂ ದಾಖಲಾತಿಗಳೊಂದಿಗೆ ಠಾಣೆಗೆ ಬಂದು ಒಂದು ವರದಿಯನ್ನು ತಯಾರಿಸಿ ನೀಡಿರುತ್ತೇನೆ. ಸದರಿ ವರದಿಯನ್ನು ನಿಶಾನೆ ಪಿ–2 ಎಂದು, ಅದರಲ್ಲಿರುವ ತನ್ನ ಸಹಿಯನ್ನು ನಿಶಾನೆ ಪಿ–2ಎ ಎಂದು ಗುರುತಿಸಲಾಯಿತು ಎಂದು ಸಾಕ್ಷಿ ನುಡಿದಿರುತ್ತಾರೆ.

ಅರ್ಜಿದಾರರ ಪಾಟೀ ಸವಾಲಿಗೆ ಉತ್ತರಿಸುತ್ತಾ, ಮಹಜರನ್ನು ತನ್ನ ಸಿಬ್ಬಂದಿಯವರಾದ ಪಿ.ಸಿ. 415 ಇವರ ಕೈಬರಹದಲ್ಲಿದೆ. ನಿಶಾನೆ ಪಿ–1 ಮಹಜರನ್ನು ಠಾಣೆಯಲ್ಲಿಯೇ ತಯಾರಿಸಲಾಗಿದೆ ಎಂದರೆ ಸರಿಯಲ್ಲ. ಸದರಿ ಜೀಪನ್ನು ಪರಿಶೀಲಿಸುವ ಮುನ್ನ ಮಾನ್ಯ ನ್ಯಾಯಾಲಯದಿಂದ ಶೋಧನಾ ವಾರಂಟ್ ಪಡೆದಿರುವುದಿಲ್ಲ. ತಾನು ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆಂದರೆ ಸರಿಯಲ್ಲವೆಂದು ಸಾಕ್ಷಿ ನುಡಿದಿರುತ್ತಾರೆ. ಇದರಿಂದ ವಾಹನದ ಮಾಲೀಕರು ತನ್ನ ವಾಹನದಲ್ಲಿ ಅಕ್ರಮವಾಗಿ ಮದ್ಯ ಸಾಗಾಟವಾಗಿಲ್ಲ ಮತ್ತು ತಾನು ಮೊಕದ್ದಮೆಯಲ್ಲಿ ಭಾಗಿಯಾಗಿರುವುದಿಲ್ಲ ಎಂಬುವುದನ್ನು ದೃಢಪಡಿಸಲು ಯಾವುದೇ ಪ್ರಯೋಜನಕರ ಸಾಕ್ಷ್ಯಾಧಾರಗಳು ದೊರೆತಿರುವುದಿಲ್ಲ.

**ಪ್ರಾ.ಸಾ: 2**

ಶ್ರೀ.ಶಿವ ಪ್ರಸಾದ್, ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ, ಪುತ್ತೂರು ಇವರು ದಿ:3 0-03 -2010 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಎ.ಡಿ.ಪಿ.ಯವರ ಮುಖ್ಯ ವಿಚಾರಣೆಗೆ ಉತ್ತರವನ್ನು ನೀಡುತ್ತಾ, ತಾನು ದಿ:4-6-2008 ರಂದು ಈ ಪ್ರಾಧಿಕಾರದ ಆದೇಶದ ಮೇರೆಗೆ ಪ್ರಕರಣಕ್ಕೆ ಸಂಬಂಧಪಟ್ಟ ಸೊತ್ತುಗಳನ್ನು ಉಪ್ಪಿನಂಗಡಿ ಪೊಲೀಸ್ ರವರಿಂದ ಪಡೆದುಕೊಂಡಿದ್ದು ಹಾಗೂ ಸದರಿ ಸೊತ್ತುಗಳೊಂದಿಗೆ ರಾಸಾಯನಿಕ ವಿಶ್ಲೇಷಕರ ವರದಿಯನ್ನು ಕೂಡಾ ಪಡೆದುಕೊಂಡಿರುತ್ತೇನೆ. ಸದರಿ ವರದಿಯನ್ನು ನಿಶಾನೆ ಪಿ–3 ಎಂದು ಗುರುತಿಸಲಾಯಿತು. ಪ್ರಾದೇಶಿಕ ಸಾರಿಗೆ ಅಧಿಕಾರಿ ಕಚೇರಿಯಿಂದ ನೀಡಲಾಗಿದ್ದ ಬಿಎಕ್ಸ್‌ಟ್ರ್ಯಾಕ್ಟ್ ವರದಿಯನ್ನು ನಿಶಾನೆ ಪಿ–4 ಎಂದು ಗುರುತಿಸಲಾಯಿತು. ತನಿಖೆ ಪೂರ್ಣಗೊಂಡ ನಂತರ ಸೊತ್ತುಗಳನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿ ವರದಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತೇನೆ. ಸದರಿ ವರದಿಯನ್ನು ನಿಶಾನೆ ಪಿ–5 ಎಂದು, ಅದರಲ್ಲಿರುವ ತನ್ನ ಸಹಿಯನ್ನು ನಿಶಾನೆ ಪಿ–5ಎ ಎಂದು ಗುರುತಿಸಲಾಯಿತು. ಸದರಿ ಪ್ರಕರಣಕ್ಕೆ ಸಂಬಂಧಪಟ್ಟ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವಂತೆ ವಿನಂತಿಸಿ ಸಾಕ್ಷಿ ನುಡಿದಿರುತ್ತಾರೆ.

ಅರ್ಜಿದಾರರ ಪಾಟೀ ಸವಾಲಿಗೆ ಉತ್ತರಿಸುತ್ತಾ, ನಿಶಾನೆ ಪಿ–5 ರ ತನಿಖಾ ವರದಿಯನ್ನು ಪೂರಕವಾಗಿ ತನಿಖೆ ಮಾಡದೆ ವರದಿ ಸಲ್ಲಿಸಿರುತ್ತೇನೆ ಎಂದರೆ ಸರಿಯಲ್ಲವೆಂದು ಉತ್ತರಿಸಿರುತ್ತಾರೆ.

**ಪ್ರಾ.ಸಾ: 3**

ಶ್ರೀ.ವಾಸು.ಡಿ,ಪುತ್ತೂರು ಇವರು ಪ್ರಕರಣದ ಪಂಚರ ಸಾಕ್ಷಿದಾರರಾಗಿ ದಿ:25-05-2010 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಎ.ಡಿ.ಪಿ.ಯವರ ಮುಖ್ಯ ವಿಚಾರಣೆಗೆ ಉತ್ತರವನ್ನು ನೀಡುತ್ತಾ, ತಾನು ನಿಶಾನೆ ಪಿ–1 ಕ್ಕೆ ಎರಡು ವರ್ಷಗಳ ಹಿಂದೆ ಉಪ್ಪಿನಂಗಡಿ ಪೊಲೀಸ್ ಠಾಣೆಯಲ್ಲಿ ಸಹಿ ಹಾಕಿರುತ್ತೇನೆ ಎಂದು ಸಾಕ್ಷಿ ನುಡಿದಿರುತ್ತಾರೆ. ಈ ಹಂತದಲ್ಲಿ ಸಾಕ್ಷಿ ಅಭಿಯೋಜನೆ ವಿರುದ್ಧವಾಗಿ ಸಾಕ್ಷಿ ನುಡಿದ ಕಾರಣ ಪ್ರತಿಕೂಲ ಸಾಕ್ಷಿಯನ್ನಾಗಿ ಪರಿಗಣಿಸುವ ಅಗತ್ಯತೆ ಇರುವುದಿಲ್ಲ ಎಂದು ತೀರ್ಮಾನಿಸಲಾಗಿದೆ.

ಪ್ರಕರಣದ ಡಿಡಬ್ಲ್ಯೂ–1 ಮತ್ತು ಡಿಡಬ್ಲ್ಯೂ–2 ರ ಸಾಕ್ಷಿ ವಿಚಾರಣೆಯಲ್ಲಿ ಅರ್ಜಿದಾರರ ಪಾಟೀ ಸವಾಲಿನ ಉತ್ತರಕ್ಕೆ ಅನುಗುಣವಾಗಿ ವಿಚಾರಣೆಯಲ್ಲಿ ಅರ್ಜಿದಾರರಿಗೆ ಯಾವುದೇ ಪ್ರಯೋಜನವಾಗಿರುವುದಿಲ್ಲ. ಪ್ರಕರಣದ ಫಿರ್ಯಾದುದಾರರು ಹಾಗೂ ತನಿಖಾಧಿಕಾರಿಯವರು ಪೂರಕವಾಗಿ ನೀಡಿರುವ ಸಾಕ್ಷ್ಯಾಧಾರದ ಮೇಲೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ದಿ:18-4-2008 ರಂದು ಜಪ್ತುಪಡಿಸಿಕೊಂಡಿರುವ ಜೀಪ್ ಸಂಖ್ಯೆ:ಕೆಎ–12–ಎನ್–8877 ರಲ್ಲಿ, ಅಕ್ರಮವಾಗಿ ಯಾವುದೇ ರಹದಾರಿ ಪತ್ರ ಹಾಗೂ ಬಿಲ್ಲುಗಳನ್ನು ಹೊಂದದೆ 17-280 ಲೀಟರ್ ಮದ್ಯವನ್ನು ಸಾಗಾಣಿಕೆ ಮಾಡಿರುವುದು ಸಾಬೀತಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

**ಡಿಡಬ್ಲ್ಯೂ–1:**

ಶ್ರೀ.ಸಂಜೀವ ಪಾವಲಿ ಪಲ್ಲ, ಪೆಟ್ರಮೆ, ಬೆಳ್ತಂಗಡಿ ತಾಲೂಕು ಇವರು ದಿ:15-6-2010 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನೀಡಿದ್ದು, ತಾನು ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನದ ಚಾಲಕನಾಗಿದ್ದು, ತಾನು ದಿ:18-4-2008 ರಂದು ತಾನು ನೆಲ್ಯಾಡಿಯ ನಯನ ಟ್ರೇಡರ್ಸ್‌ನಿಂದ 4 ಗೋಣಿ ಸಿಮೆಂಟ್, 2 ದಾರಂದಮತ್ತು 2 ಕಿಟಿಕಿಯನ್ನು ಜೀಪಿನಲ್ಲಿ ತುಂಬಿಸಿ ಹೊರಡುವಾಗ ಅಲ್ಲಿಗೆ ಪೊಲೀಸರು ಬಂದು ತನ್ನ ಜೀಪ್‌ನೊಂದಿಗೆ ಪೊಲೀಸ್ ಠಾಣೆಗೆ ಹೊರಡಲು ಸೂಚಿಸಿದ್ದು, ತಾನು ನಯನ ಟ್ರೇಡರ್ಸ್‌ನಿಂದ ಪಡೆದುಕೊಂಡ ಸರಕುಗಳನ್ನು ಶ್ರೀ.ಶೇಖರ್ ನಾಯ್ಕ್ ಎಂಬುವವರ ಮನೆಗೆ ಮುಟ್ಟಿಸಬೇಕಾಗಿತ್ತು ಎಂದು ಹೇಳಿದರೂ ಕೂಡಾ ತನ್ನನ್ನು ಪೊಲೀಸ್ ಠಾಣೆಗೆ ಜೀಪಿನೊಂದಿಗೆ ಕರೆದುಕೊಂಡು ಜೀಪಿನ ಮಾಲೀಕರಿಗೆ ಫೋನ್ ಮಾಡಿ ಠಾಣೆಗೆ ಬರಲು ಹೇಳಿದರು. ತನ್ನ ಮೇಲೆ ಮದ್ಯ ಸಾಗಾಟದ ಬಗ್ಗೆ ಆರೋಪ ಹೊರಿಸಿ ತನ್ನನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿರುತ್ತಾರೆ. ಜೀಪಿನಲ್ಲಿ ಯಾವುದೇ ಮದ್ಯ ಸಾಗಾಟ ಮಾಡಿರುವುದಿಲ್ಲವೆಂದು, ತನ್ನ ಮೇಲೆ ಸುಳ್ಳು ಮೊಕದ್ದಮೆಯನ್ನು ದಾಖಲಿಸಿರುತ್ತಾರೆ ಎಂದು ಸಾಕ್ಷಿ ನುಡಿದಿರುತ್ತಾರೆ.

ಎ.ಡಿ.ಪಿ.ಯವರ ಪಾಟೀ ಸವಾಲಿಗೆ ಉತ್ತರಿಸುತ್ತಾ, ಸದರಿ ಜೀಪಿನಲ್ಲಿದ್ದ ಸರಕುಗಳನ್ನು ಬೇರೆ ಜೀಪಿಗೆ ಯಾರು ಹಾಕಿರುತ್ತಾರೆ ಎಂದರೆ ಗೊತ್ತಿಲ್ಲ. ಆ ದಿವಸ ಜೀಪಿನ ಮಾಲಿಕರು ಠಾಣೆಗೆ ಬಂದಿರುತ್ತಾರೆ. ತನ್ನ ಮೇಲೆ ಮಾನ್ಯ ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ಸದರಿ ಮೊಕದ್ದಮೆಗೆ ಸಂಬಂಧಿಸಿ ವಿಚಾರಣೆ ನಡೆಯುತ್ತಿದೆ. ತನಗೆ ಯಾರು ವೈರಿಗಳಿಲ್ಲ. ತಾನು ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆಂದರೆ ಸರಿಯಲ್ಲ ಎಂದು ಸಾಕ್ಷಿ ನುಡಿದಿರುತ್ತಾರೆ.

**ಡಿಡಬ್ಲ್ಯೂ–2:**

ಶ್ರೀ.ಕೊರಗಪ್ಪ ಶೆಟ್ಟಿ, ಪಟ್ರಮೆ, ಬೆಳ್ತಂಗಡಿ ತಾಲೂಕು ಇವರು ದಿ:27-7-2010 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನೀಡಿದ್ದು, ತಾನು ತಕ್ಷೀರಿನಲ್ಲಿ ವಶಪಡಿಸಿಕೊಂಡ ಜೀಪಿನ ಮಾಲೀಕನಾಗಿದ್ದು, ತನ್ನ ಜೀಪಿಗೆ ಸಂಜೀವ ಎಂಬುವವರನ್ನು ಚಾಲಕನಾಗಿ ನೇಮಿಸಿ ಕೊಟ್ಟಿರುತ್ತೇನೆ. ಆತನು ನವೆಂಬರ್–2007 ರಿಂದ ಎಪ್ರಿಲ್–2008 ರ ತನಕ ಚಾಲಕನಾಗಿರುತ್ತಾರೆ. ತನಗೆ ದಿ: 18-4-2008 ರಂದು ತನ್ನ ಚಾಲಕ ಫೋನ್ ಮಾಡಿ, ತನ್ನ ಜೀಪನ್ನು ಪೊಲೀಸರು ಹಿಡಿದಿದ್ದು, ಠಾಣೆಗೆ ಬರಬೇಕೆಂದು ತಿಳಿಸಿರುತ್ತಾರೆ. ತಾನು ಠಾಣೆಗೆ ಹೋಗಿ ಪರಿಶೀಲಿಸಿದಾಗ, ತನ್ನ ಜೀಪಿನ ಹಾಗೂ ಚಾಲಕನ ವಿರುದ್ಧ ಮೊಕದ್ದಮೆ ದಾಖಲಿಸಿರುತ್ತಾರೆ. ತಾನು ನಂತರ ಪೊಲೀಸ್‌ನವರಿಗೆ ಯಾವ ಕಾರಣಕ್ಕಾಗಿ ಜೀಪಿನ ಮೇಲೆ ಮೊಕದ್ದಮೆ ದಾಖಲಿಸಿರುವುದಾಗಿ ಎಂದು ಪ್ರಶ್ನಿಸಿದಾಗ, ಯಾಕೆ ಪೊಲೀಸರಿಗೆ ಬಾಡಿಗೆಗೆ ಕೊಡಲಿಲ್ಲ ಎಂಬ ಕಾರಣಕ್ಕಾಗಿ ಮೊಕದ್ದಮೆ ದಾಖಲಿಸಿರುತ್ತಾರೆ ಎಂದು ಹೇಳಿದರು. ಪೊಲೀಸರು ಹೇಳಿರುವಂತೆ ತನ್ನ ಜೀಪಿನಲ್ಲಿ ಯಾವುದೇ ಮದ್ಯ ಸಾಗಾಟವಾಗಿರುವುದಿಲ್ಲ. ಸದರಿ ದಿನಾಂಕದಂದು ತನ್ನ ಜೀಪಿನಲ್ಲಿ ಸಾಗಾಟ ಮಾಡಿದ ಸರಕುಗಳ ಬಗ್ಗೆ ನಯನ ಟ್ರೇಡರ್ಸ್, ನೆಲ್ಯಾಡಿರವರು ನೀಡಿದ ರಶೀದಿಯನ್ನು ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಿದ್ದು, ಸದರಿ ರಶೀದಿಯನ್ನು ನಿಶಾನೆ ಡಿ–1 ಎಂದು ಗುರುತಿಸಲಾಯಿತು ಎಂದು ಸಾಕ್ಷಿ ನುಡಿದಿರುತ್ತಾರೆ.

ಎ.ಡಿ.ಪಿ.ಯವರ ಪಾಟೀ ಸವಾಲಿಗೆ ಉತ್ತರಿಸುತ್ತಾ, ಪೊಲೀಸ್ ಠಾಣೆಯ ಯಾವ ಪೊಲೀಸರು ನಿರ್ದಿಷ್ಟವಾಗಿ ತನ್ನ ವಾಹನವನ್ನು ಬಾಡಿಗೆಗೆ ಕೇಳಿದ್ದು ಎಂಬುವುದು ಗೊತ್ತಿಲ್ಲ. ಉಪ್ಪಿನಂಗಡಿಯಲ್ಲಿ ಸುಮಾರು 150 ಕ್ಕಿಂತಲೂ ಹೆಚ್ಚು ವಾಹನಗಳನ್ನು ಬಾಡಿಗೆಗೆ ಓಡಿಸಿರುತ್ತಾರೆ. ಪೊಲೀಸರಿಗೆ ಜೀಪ್

ಅಥವಾ ಇತರ ವಾಹನ ಕೊಡದ ಬಗ್ಗೆ ತನ್ನ ಮೇಲೆ ಮೊಕದ್ದಮೆ ದಾಖಲಿಸಿರುತ್ತಾರೆ ಎಂಬ ಬಗ್ಗೆ ತನಗೆ ಗೊತ್ತಿಲ್ಲ. ಈ ಪ್ರಾಧಿಕಾರದ ಮುಂದೆ ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆ ಎಂದರೆ ಸರಿಯಲ್ಲವೆಂದು ಸಾಕ್ಷಿ ನುಡಿದಿರುತ್ತಾರೆ.

ತಕ್ಷೀರಿನಲ್ಲಿ ವಾಹನದ ಚಾಲಕರಾದ ಸಂಜೀವರವರ ಹೇಳಿಕೆ ಹಾಗೂ ವಾಹನದ ಮಾಲೀಕರಾದ ಶ್ರೀ.ಕೊರಗಪ್ಪ ಶೆಟ್ಟಿರವರ ಹೇಳಿಕೆಗಳು ಒಂದಕ್ಕೊಂದು ಪೂರಕವಾಗಿ ಸಾಕ್ಷಿನೀಡಿರುವುದಿಲ್ಲ. ವಾಹನದ ಮಾಲೀಕರು ನೀಡಿರುವ ಸಾಕ್ಷಿ ಹೇಳಿಕೆಯಲ್ಲಿ, ಪೊಲೀಸರು ತನ್ನ ಜೀಪನ್ನು ಬಾಡಿಗೆಗೆ ಕೊಡಲಿಲ್ಲ ಎಂಬ ಕಾರಣಕ್ಕಾಗಿ ತನ್ನ ವಿರುದ್ದ ಸುಳ್ಳು ಮೊಕದ್ದಮೆ ದಾಖಲಿಸಿ ಜೀಪನ್ನು ವಶಪಡಿಸಿಕೊಂಡಿರುತ್ತಾರೆ ಎಂದು ಸಾಕ್ಷಿ ನುಡಿದಿರುತ್ತಾರೆ. ಆದರೆ ಪೊಲೀಸ್ ಠಾಣೆಯ ಯಾವ ಪೊಲೀಸರು ನಿರ್ದಿಷ್ಟವಾಗಿ ತನ್ನ ವಾಹನವನ್ನು ಬಾಡಿಗೆಗೆ ಕೇಳಿರುವ ಬಗ್ಗೆ ಮೇಲಾಧಿಕಾರಿಗಳಿಗೂ ಹಾಗೂ ಪೊಲೀಸ್ ಠಾಣೆಯಲ್ಲಿ ಯಾವುದೇ ದೂರು ಸ್ವೀಕೃತವಾಗಿರುವುದಿಲ್ಲ ಹಾಗೂ ಮಾಲೀಕ ಹಾಗೂ ಚಾಲಕರ ಮೇಲೆ ಬೇರೆ ಯಾರೋ ವೈರತ್ವದಿಂದ ಈ ಕೃತ್ಯ ಎಸಗಿರುತ್ತಾರೆಂದು ಸಾಬೀತುಪಡಿಸಲು ಯಾವುದೇ ಹೇಳಿಕೆಗಳನ್ನು ಹಾಗೂ ದಾಖಲಾತಿಗಳನ್ನು ಹಾಜರುಪಡಿಸಿರುವುದಿಲ್ಲ. ಪೊಲೀಸ್ ಉಪ ನಿರೀಕ್ಷಕರು, ಪುತ್ತೂರು ಗ್ರಾಮಾಂತರ ಪೊಲೀಸ್ ಠಾಣೆ, ಉಪ್ಪಿನಂಗಡಿ ಇವರು ದಿ:18-4-2008 ರಂದು ತಯಾರಿಸಿದ ಮಹಜರಿನಲ್ಲಿ ನಮೂದಿಸಿದಂತೆ, ಆರೋಪಿಯಾದ ಸಂಜೀವ ಇವರನ್ನು ಮದ್ಯ ಸಾಗಾಟದ ಬಗ್ಗೆ ವಿಚಾರಿಸಿದಾಗ, ತಾನು ಮದ್ಯವನ್ನು ನೆಲ್ಯಾಡಿ ಕ್ಲಾಸಿಕ್ ಬಾರ್‌ನಿಂದ ಖರೀದಿಸಿ ಮಾರಾಟ ಮಾಡಲೆಂದು ತಿಳಿಸಿರುತ್ತಾನೆ. ಆದುದರಿಂದ ವಾಹನದ ಮಾಲೀಕರಾದ ಶ್ರೀ.ಕೊರಗಪ್ಪ ಶೆಟ್ಟಿ ಮತ್ತು ಚಾಲಕನಾದ ಸಂಜೀವ ಇವರುಗಳು ಕೂಡಿಕೊಂಡು ತಮ್ಮ ಜೀಪಿನಲ್ಲಿ ಹೆಚ್ಚಿನ ಹಣ ಸಂಪಾದನೆ ಮಾಡುವ ದೃಷ್ಟಿಯಿಂದ ಮದ್ಯ ಸಾಗಾಟ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಆದುದರಿಂದ ದಿನಾಂಕ:18-4-2008 ರಂದು ಜೀಪ್ ಸಂಖ್ಯೆ:ಕೆಎ–12–ಎನ್–8877 ನ್ನು ಯಾವುದೇ ರಹದಾರಿ ಪತ್ರವಿಲ್ಲದೆ ಅಕ್ರಮವಾಗಿ ಮದ್ಯ ಸಾಗಾಣಿಕೆಗೆ ಬಳಸಿರುವುದು ನಿಸ್ಸಂದೇಹವಾಗಿ ಸಾಬೀತಾಗಿರುತ್ತದೆ. ಈ ಮೇಲಿನ ಕಾರಣಗಳಿಂದ ಎರಡನೇ ಅಂಶವನ್ನು ನಕಾರಾತ್ಮಕವಾಗಿ ಪರಿಗಣಿಸಿದೆ.

ಮೇಲಿನ ಎಲ್ಲಾ ಕಾರಣಗಳಿಂದ ಫಿರ್ಯಾದುದಾರರು ಹಾಗೂ ತನಿಖಾಧಿಕಾರಿಗಳ ಮತ್ತು ಮಹಜರು ಸಾಕ್ಷಿಗಳ ವಿಚಾರಣೆ ಹಾಗೂ ರಾಸಾಯನಿಕ ವಿಶ್ಲೇಷಕರ ವರದಿ ಮತ್ತು ಲಭ್ಯವಿರುವ ದಾಖಲಾತಿಗಳಿಂದ, ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ಜೀಪ್ ಸಂಖ್ಯೆ: ಕೆಎ–12–ಎನ್–8877 ನ್ನು ಅಕ್ರಮವಾಗಿ 17-280 ಲೀಟರ್ ಮದ್ಯವನ್ನು ಸಾಗಾಟ ಮಾಡಲು ಬಳಸಲಾಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ, ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43 ಎ ರಡಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುವುದರಿಂದ, ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ಜೀಪ್ ಸಂಖ್ಯೆ: ಕೆಎ–12–ಎನ್–8877 ನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ/90/ಡಿಟಿಸಿಆರ್/2007-08 ದಿ: 3 1-07-2010**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಾಲಂ 43 (ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, ನಿಯಮ 43 (ಬಿ) ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಪೊಲೀಸ್ ಉಪ ನಿರೀಕ್ಷಕರು, ಪುತ್ತೂರು ಗ್ರಾಮಾಂತರ ಪೊಲೀಸ್ ಠಾಣೆ, ಉಪ್ಪಿನಂಗಡಿ ಇವರ ತಕ್ಷೀರು ಸಂಖ್ಯೆ: 65/2008 ದಿನಾಂಕ: 18-4-2008 ರಲ್ಲಿ ಜಪ್ತುಪಡಿಸಿರುವ ಜೀಪ್ ಸಂಖ್ಯೆ:ಕೆಎ–12–ಎನ್–8877 ನ್ನು ನಿಯಮ 43 ಎ(2) ರನ್ವಯ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಪ್ರಾಧಿಕಾರದಿಂದ ದಿ:4-6-2008 ರಂದು ವಾಹನವನ್ನು ತಾತ್ಕಾಲಿಕವಾಗಿ ಮಧ್ಯಂತರ ಬಿಡುಗಡೆಗೊಳಿಸಿ ಹೊರಡಿಸಿರುವ ಆದೇಶವನ್ನು ರದ್ದುಗೊಳಿಸಿ ಆದೇಶಿಸಿದೆ. ಆರ್.ಸಿ. ಮಾಲೀಕರು ಸದರಿ ಮಧ್ಯಂತರ ಬಿಡುಗಡೆ ಹೊಂದಿರುವ ಜೀಪ್ ಸಂಖ್ಯೆ:ಕೆಎ–12–ಎನ್–8877 ನ್ನು ಈ ಆದೇಶದ 30 ದಿನಗಳ ಒಳಗೆ ಈ ಪ್ರಾಧಿಕಾರದ ವಶಕ್ಕೆ ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ ಇವರಲ್ಲಿ ಒಪ್ಪಿಸಲು ಆದೇಶಿಸಿದೆ. ತಪ್ಪಿದಲ್ಲಿ ಭದ್ರತೆಯಾಗಿ ಬ್ಯಾಂಕ್ ಗ್ಯಾರಂಟಿಮೊತ್ತ ರೂ.51,250/– ವನ್ನು ಸರಕಾರದ ಭದ್ರತಾ ಖಾತೆಯಲ್ಲಿ ಇರಿಸಿರುವ ಮೊತ್ತವನ್ನು ಖಾಯಂ ಆಗಿ ಸರಕಾರಕ್ಕೆ ಜಮಾಗೊಳಿಸಲು ಆದೇಶಿಸಿದೆ.

ಈ ಆದೇಶದ ಪಾಲನೆ ಬಗ್ಗೆ ಹಾಗೂ ಸದ್ರಿ ಮುಟ್ಟುಗೋಲು ಹಾಕಿಕೊಳ್ಳಲಾದ ವಾಹನವನ್ನು ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ, ಪುತ್ತೂರು ಇವರು ಪಡೆದುಕೊಂಡು ಈ ಪ್ರಾಧಿಕಾರಕ್ಕೆ ವರದಿ ಒಪ್ಪಿಸಲು ಆದೇಶಿಸಿದೆ.

ಈ ಆದೇಶವನ್ನು ದಿ:3 1-07-2010 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 3 0 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,

ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–1**

ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ

ಪ್ರಾ.ಸಾ: 1- ಶ್ರೀ.ಚಂದ್ರಶೇಖರಯ್ಯ, ಸಹಾಯಕ ಪೊಲೀಸ್ ನಿರೀಕ್ಷಕರು, ಬೆಳ್ತಂಗಡಿ.

ಪ್ರಾ.ಸಾ: 2 - ಶ್ರೀ.ಶಿವ ಪ್ರಸಾದ್, ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ, ಪುತ್ತೂರು.

ಪ್ರಾ.ಸಾ: 3 - ಶ್ರೀ.ವಾಸು.ಡಿ, ಪುತ್ತೂರು. (ಪಂಚರ ಸಾಕ್ಷಿ)

**ಅನುಬಂಧ–2**

ಫಿರ್ಯಾದುದಾರರ ಪರ ಮಂಡಿಸಲಾದ ದಾಖಲಾತಿಗಳು

ನಿಶಾನೆ ಪಿ–1 : ಮಹಜರ್ ಪ್ರತಿ

ನಿಶಾನೆ ಪಿ–1ಎ : ಮಹಜರ್‌ನಲ್ಲಿ ಫಿರ್ಯಾದುದಾರರ ಸಹಿ

ನಿಶಾನೆ ಪಿ–2 : ಪ್ರಾ.ಸಾ.1ರವರ ವರದಿ.

ನಿಶಾನೆ ಪಿ–2A : ಸದರಿ ವರದಿಯಲ್ಲಿ ಪ್ರಾ.ಸಾ.1ರವರ ಸಹಿ.

ನಿಶಾನೆ ಪಿ–3 : ಕೆಮಿಕಲ್ ವರದಿ.

ನಿಶಾನೆ ಪಿ–4 : ವಾಹನದ ಬಿ ಎಕ್ಸ್‌ಟ್ರ್ಯಾಕ್ಟ್ ವರದಿ.

ನಿಶಾನೆ ಪಿ–5 : ಪ್ರಾ.ಸಾ.2ರವರ ತನಿಖಾ ವರದಿ.

ನಿಶಾನೆ ಪಿ–5A : ಸದರಿ ವರದಿಯಲ್ಲಿ ಪ್ರಾ.ಸಾ.2ರವರ ಸಹಿ.

**ಅನುಬಂಧ–3**

**ವಾಹನ ಮಾಲೀಕರ ಪರ ವಿಚಾರಣೆಗೆ ಸಲ್ಲಿಸಿದ ಸಾಕ್ಷಿದಾರರು:**

ಡಿಡಬ್ಲ್ಯು–1: ಶ್ರೀ.ಸಂಜೀವ ಪಾವಲಿ ಪಲ್ಲ(ಚಾಲಕ), ಪೆಟ್ರಮೆ, ಬೆಳ್ತಂಗಡಿ ತಾಲೂಕು.

ಡಿಡಬ್ಲ್ಯು–2: ಶ್ರೀ.ಕೊರಗಪ್ಪ ಶೆಟ್ಟಿ, ಪಟ್ರಮೆ, ಬೆಳ್ತಂಗಡಿ ತಾಲೂಕು.

**ಅನುಬಂಧ–4**

**ವಾಹನ ಮಾಲೀಕರ ಪರವಾಗಿ ಗುರುತಿಸಲಾದ ಸಾಕ್ಷಿದಾರರು:**

ನಿಶಾನೆ ಡಿ–1: ಮೆ:ನಯನ ಟ್ರೇಡರ್ಸ್, ನೆಲ್ಯಾಡಿ, ಪುತ್ತೂರುರವರ ರಶೀದಿ.

**ನೂರ್ ಮಹಮ್ಮದ್ ಹುಸೇನ್**

ಪಿ.ಆರ್.1267

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ,**
**ಮಂಗಳೂರು ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಎಸ್‌ಡಿಕೆ/185/ಡಿಟಿಸಿಆರ್/2008-09 ದಿನಾಂಕ: 3 1-07-2010**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್

ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**

ಪೊಲೀಸ್ ನಿರೀಕ್ಷಕರು,
ಪುತ್ತೂರು ನಗರ ಪೊಲೀಸ್ ಠಾಣೆ, ಪುತ್ತೂರು.

**ಆರೋಪಿಗಳು:**

1) ಅಬ್ದುಲ್ ಲತೀಫ್ (28 ವ),
ಬಿನ್:ಮಹಮ್ಮದ್, ವಾಸ: ಪೆರ್ಮುದೆ ಹೌಸ್, ಪೈವಳಿಕೆ ಗ್ರಾಮ,
ಕಾಸರಗೋಡು ತಾಲೂಕು, ಕಾಸರಗೋಡು ಜಿಲ್ಲೆ.

2) ಹಾಸಿಂ(26 ವ),
ಬಿನ್:ಮಹಮ್ಮದ್, ಚೆಂಗಳ ಮನೆ, ಚೆಂಗಳ ಗ್ರಾಮ ಮತ್ತು ಅಂಚೆ,
ಕಾಸರಗೋಡು ಜಿಲ್ಲೆ.

3 ) ಜಯನ್ ಯಾನೆ ಅಜಯನ್(26 ವ), ಬಿನ್: ಕುಮಾರನ್,
ವಾಸ: ಕೋಯಂಗಾಣಮ್ ಹೌಸ್,
ಬೇವಿಂಜೆ, ತೆಕ್ಕಿಲಪೆರಿ ಗ್ರಾಮ, ಕಾಸರಗೋಡು ಜಿಲ್ಲೆ, ಕೇರಳ.

**ವಾಹನ ಮಾಲೀಕರು:**

ಶ್ರೀ.ಬಶೀರ್.ಎಂ (3 5 ವ), ಬಿನ್: ಮಹಮ್ಮದ್.ಎಂ
ವಾಸ: ಡೋರ್ ನಂ: 1-23 2, ಚೆಂಗುಳ ಪಂಚಾಯತ್,
ಕಾಸರಗೋಡು ಜಿಲ್ಲೆ, ಕೇರಳ.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:11-12-2008 ರಂದು ಬೆಳಗ್ಗಿನ ಜಾವ 5-00 ಗಂಟೆ ಸಮಯಕ್ಕೆ ಸಹಾಯಕ ಪೊಲೀಸ್ ಅಧೀಕ್ಷಕರ ಆದೇಶದಂತೆ ಪುತ್ತೂರು ನಗರ ಪೊಲೀಸ್ ಠಾಣೆಯ ಪೊಲೀಸ್ ನಿರೀಕ್ಷಕರಿಗೆ ದೊರೆತ ಖಚಿತ ವರ್ತಮಾನದ ಮೇರೆಗೆ, ಸಾರಾಯಿ ಸ್ಯಾಚೆಟ್‌ಗಳ ಸಾಗಾಟವನ್ನು ಪತ್ತೆ ಹಚ್ಚುವ ಸಲುವಾಗಿ ಮೂರು ತಂಡಗಳನ್ನು ರಚಿಸಿ ದಿ:10-12-2008 ರ ರಾತ್ರಿಯಿಂದ ಹೊಂಚು ಹಾಕಿ ಕಾಯುತ್ತಿರುವಾಗ, ಪುತ್ತೂರು ತಾಲೂಕು ಕಬಕ ಗ್ರಾಮದ ಕಡೆಯಿಂದ ಲಿನೆಟ್ ಜಂಕ್ಷನ್ ಕಡೆ ಬರುತ್ತಿದ್ದ ಖಚಿತ ವರ್ತಮಾನದ ಆಲ್ಟೊ ಕಾರು ಸಂಖ್ಯೆ: ಕೆಎಲ್–14–ಜಿ–5287 ನ್ನು ತಮ್ಮ ಸಿಬ್ಬಂದಿಯವರು ಬೆನ್ನಟ್ಟಿ ತಡೆದು ನಿಲ್ಲಿಸಿ ಪರಿಶೀಲಿಸಿದಾಗ, ಅದರ ಒಳಭಾಗದಲ್ಲಿ ಎರಡು ಪಾಲಿಥಿನ್ ಚೀಲಗಳಲ್ಲಿ ಸಾರಾಯಿ ತೊಟ್ಟೆಗಳು ತುಂಬಿರುವುದು ಪತ್ತೆಯಾದವು. ನಂತರ ಕಾರಿನೊಳಗೆ ಇದ್ದ ಮೂರು ಜನರನ್ನು ಹಾಗೂ ತೊಟ್ಟೆ ಸಾರಾಯಿ ತುಂಬಿದ ಎರಡು ಪಾಲಿಥಿನ್ ಚೀಲಗಳನ್ನು ಪತ್ತೆ ಮಾಡಿರುವುದಾಗಿ ತಿಳಿಸಿರುವ ಮೇರೆಗೆ, ಪಾಣಾಜೆ ಕ್ರಾಸ್‌ನಲ್ಲಿರುವ ಪಂಚರು ಹಾಗೂ ಸಿಬ್ಬಂದಿಯವರೊಂದಿಗೆ ಲಿನೆಟ್ ಸಮೀಪ ಬಂದು ನೋಡಲಾಗಿ, ಆಲ್ಟೊ ಕಾರಿನಲ್ಲಿದ್ದ ಮೂರು ಜನ ವ್ಯಕ್ತಿಗಳು

ಮತ್ತು ಎರಡು ಪಾಲಿಥಿನ್ ಚೀಲ ತೊಟ್ಟೆ ಸಾರಾಯಿ ತುಂಬಿರುವುದನ್ನು ಕಂಡು, ಈ ಬಗ್ಗೆ ಕಾರಿನಲ್ಲಿದ್ದ ವ್ಯಕ್ತಿಗಳನ್ನು ವಿಚಾರಿಸಿದಾಗ, ಸದರಿ ವ್ಯಕ್ತಿಗಳ ಹೆಸರು ಮತ್ತು ವಿಳಾಸ ಕೇಳಲಾಗಿ 1) ಅಬ್ದುಲ್ ಲತೀಫ್ (28 ವ), ಬಿನ್: ಮಹಮ್ಮದ್, ವಾಸ: ಪೆರ್ಮುದೆ ಹೌಸ್, ಪೈವಳಿಕೆ ಗ್ರಾಮ, ಕಾಸರಗೋಡು ಜಿಲ್ಲೆ, ಕೇರಳ ರಾಜ್ಯ. 2) ಹಾಸಿಂ, ಬಿನ್: ಮಹಮ್ಮದ್, ಚೆಂಗಳ ಮನೆ, ಚೆಂಗಳ ಗ್ರಾಮ, ಕಾಸರಗೋಡು ಜಿಲ್ಲೆ, ಕೇರಳ ರಾಜ್ಯ. 3 ) ಜಯನ್ ಯಾನೆ ಅಜಯನ್(26 ವ), ಬಿನ್: ಕುಮಾರನ್, ವಾಸ: ಕೊಯಂಗಾನಮ್ ಹೌಸ್, ಬೇವಿಂಜೆ, ತೆಕ್ಕಿಲ್‌ಪೆರಿ ಗ್ರಾಮ, ಕಾಸರಗೋಡು ಜಿಲ್ಲೆ ಎಂಬುದಾಗಿ ತಿಳಿಸಿದರು. ನಂತರ ಸದ್ರಿಯವರಲ್ಲಿ ತೊಟ್ಟೆ ಸಾರಾಯಿಗಳನ್ನು ಸಾಗಾಟ ಮಾಡಲು ಪರವಾನಿಗೆ ಇದೆಯೇ ಎಂದು ಕೇಳಲಾಗಿ, ಯಾವುದೇ ದಾಖಲಾತಿಗಳು ಇರುವುದಿಲ್ಲವೆಂದು ತಿಳಿಸಿದ್ದು, ಸದ್ರಿ ಆರೋಪಿತರು ಅಕ್ರಮವಾಗಿ ಯಾವುದೇ ಪರವಾನಿಗೆ ಇಲ್ಲದೆ ತೊಟ್ಟೆ ಸಾರಾಯಿಗಳನ್ನು ಕೇರಳ ರಾಜ್ಯಕ್ಕೆ ಸಾಗಾಟ ಮಾಡಿರುವುದಾಗಿ ತಿಳಿಸಿದರು. ಸದರಿಯವರ ಜೊತೆಯಲ್ಲಿ ಯೂಸುಬ್ ಮತ್ತು ರಹೀಂ ಎಂಬುವವರು ಕೂಡಾ ಇದ್ದು, ಸದರಿಯವರು ತಪ್ಪಿಸಿಕೊಂಡು ಓಡಿ ಪರಾರಿಯಾಗಿರುವುದಾಗಿ ತಿಳಿಸಿರುತ್ತಾರೆ. ಸದರಿ ಕಾರನ್ನು ಪಂಚರ ಹಾಗೂ ಸಿಬ್ಬಂದಿಯವರ ಸಮಕ್ಷಮ ಪರಿಶೀಲಿಸಿದಾಗ, ಅಕ್ರಮ ಸಾರಾಯಿ ಸ್ಯಾಚೆಟ್‌ಗಳನ್ನು ಸಾಗಾಟ ಮಾಡುತ್ತಿದ್ದ ಆಲ್ಟೋ ಕಾರು ಸಂಖ್ಯೆ: ಕೆಎಲ್–14–ಜಿ–5287 ಬಿಳಿ ಬಣ್ಣದಾಗಿದ್ದು, ಇದರ ಅಂದಾಜು ಮೌಲ್ಯ ಸುಮಾರು ರೂ.3,00,000/– ಗಳಾಗಬಹುದೆಂದು ಅಂದಾಜಿಸಿ ಇಲಾಖಾ ವಶಕ್ಕೆ ಸ್ವಾಧೀನಪಡಿಸಿಕೊಳ್ಳಲಾಯಿತು. ಕಾರಿನ ಹಿಂಭಾಗದಲ್ಲಿದ್ದ ಎರಡು ಪಾಲಿಥಿನ್ ಚೀಲಗಳನ್ನು ಹೊರಗೆ ತೆಗೆದು ಪರಿಶೀಲಿಸಿದಾಗ, 100 ಎಂ.ಎಲ್.ನ ಒಟ್ಟು 1000 ಸಾರಾಯಿ ಸ್ಯಾಚೆಟ್‌ಗಳು ಇದ್ದು, ಸಾರಾಯಿ ಸ್ಯಾಚೆಟ್‌ಗಳ ಮೇಲೆ ಅಬಕಾರಿ ಭದ್ರತಾ ಉಗ್ರಾಣದಲ್ಲಿ ತಯಾರಿಸಿದ ಮೈ.ಶುಗರ್ ಸಾರಾಯಿ ಸಂಸ್ಕರಣ ಘಟಕ ಕಂಪೆನಿ ಲಿಮಿಟೆಡ್, ಮಂಡ್ಯ ಸಾರಾಯಿ ಮದ್ಯಪಾನ ಆರೋಗ್ಯಕ್ಕೆ ಹಾನಿಕಾರ, ಸನ್ನದು ಸಂಖ್ಯೆ: ಇಸಿಡಿ/14/ಟಿ ಅಂಡ್ ಎ/2005-06 ದಿ:6-9-2006 ಮತ್ತು 35 ಡಿಗ್ರಿ ಯು.ಪಿ. ಎಂದು ಬರೆದಿದ್ದು, ಇದರ ಅಂದಾಜು ಮೌಲ್ಯ ರೂ.10,000/– ಗಳಾಗಬಹುದೆಂದು ಅಂದಾಜಿಸಲಾಗಿದೆ. ಇವುಗಳ ಪೈಕಿ 100 ಎಂ.ಎಲ್.ನ 4 ಸಾರಾಯಿ ಸ್ಯಾಚೆಟ್‌ಗಳನ್ನು ಸ್ಯಾಂಪಲ್‌ಗಾಗಿ ತೆಗೆದು, ಅದಕ್ಕೆ ಬಿಳಿ ಬಟ್ಟೆಯಿಂದ ಪ್ಯಾಕ್ ಮಾಡಿ ಎಸ್.ಹೆಚ್.ಓ. ಅರಗು ಸೀಲ್ ಮಾಡಿ ಮುಂದಿನ ಸೂಕ್ತ ಕ್ರಮದ ಬಗ್ಗೆ ಸ್ವಾಧೀನಪಡಿಸಿಕೊಳ್ಳಲಾಯಿತು. ಬಳಿಕ ಆರೋಪಿ ಅಬ್ದುಲ್ ಲತೀಫ್ ಎಂಬಾತನಿಂದ ಜಪ್ತು ಮಾಡಲಾದ ನಗದು ರೂ.18,000/– ಹಾಗೂ ಹಾಸಿಂ ಎಂಬ ವ್ಯಕ್ತಿಯಿಂದ ರೂ.19,000/– ಒಟ್ಟು 37,000/– ಗಳ ನಗದು ಹಣ ದೊರೆತ್ತಿದ್ದು, ಸದರಿ ಹಣವು ಅಕ್ರಮವಾಗಿ ಸಾರಾಯಿ ಸ್ಯಾಚೆಟ್‌ಗಳನ್ನು ಸಾಗಾಟ ಮಾಡಿ ಬಂದ ಹಣವಾಗಿರುತ್ತದೆಂದು ತಿಳಿಸಿರುವುದರಿಂದ, ಸದರಿ ಹಣವನ್ನು ಮುಂದಿನ ಸೂಕ್ತ ಕ್ರಮಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾಯಿತು. ಇದು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 32, 34, 43 (ಎ) ಪ್ರಕಾರ ಅಪರಾಧ ಹಾಗೂ ಶಿಕ್ಷಾರ್ಹವಾಗಿರುವುದರಿಂದ, ಆರೋಪಿಗಳನ್ನು ಸ್ಥಳದಲ್ಲಿಯೇ ದಸ್ತಗಿರಿ ಮಾಡಿ ಅಕ್ರಮ ಸಾಗಾಟಕ್ಕೆ ಬಳಸಿದ ಆಲ್ಟೋ ಕಾರು ಸಂಖ್ಯೆ: ಕೆಎಲ್–14–ಜಿ–5287 ಮತ್ತು 100 ಎಂ.ಎಲ್.ನ 1000 ಸಾರಾಯಿ ಸ್ಯಾಚೆಟ್‌ಗಳನ್ನು ಮತ್ತು ಸಾರಾಯಿ ಮಾರಾಟ ಮಾಡಿದ ನಗದು ಹಣ ರೂ.3 7,000/– ವನ್ನು ಮುಂದಿನ ಸೂಕ್ತ ಕ್ರಮಕ್ಕಾಗಿ ವಶಪಡಿಸಿಕೊಂಡು, ಮಹಜರನ್ನು ಸ್ಥಳದಲ್ಲಿಯೇ ಬರೆದು, ಮಹಜರಿನಲ್ಲಿ ಪಂಚರ ಹಾಗೂ ಸಿಬ್ಬಂದಿಯವರ ಸಹಿಯನ್ನು ಪಡೆದು ಹಾಗೂ ಮಹಜರಿನಲ್ಲಿ ಸ್ಥಳ ಚೆಕ್‌ಬಂದಿ ನಮೂದಿಸಿ ಆರೋಪಿಗಳ ವಿರುದ್ದ ತಕ್ಷೀರು ಸಂಖ್ಯೆ: 211/2008 ದಿ:11-12-2008 ರಂತೆ ಮೊಕದ್ದಮೆ ದಾಖಲಿಸಿಕೊಂಡು ಮಾನ್ಯ ನ್ಯಾಯಾಲಯಕ್ಕೆ ಹಾಗೂ ತಮ್ಮ ಮೇಲಾಧಿಕಾರಿಗಳಿಗೆ ಮತ್ತು ಈ ಪ್ರಾಧಿಕಾರಕ್ಕೆ ವರದಿಯನ್ನು ಸಲ್ಲಿಸಿರುತ್ತಾರೆ.

ಪೊಲೀಸ್ ಉಪ ನಿರೀಕ್ಷಕರು, ಪುತ್ತೂರು ನಗರ ಪೊಲೀಸ್ ಠಾಣೆ, ಪುತ್ತೂರು ಇವರ ಪತ್ರ ಸಂಖ್ಯೆ ದಿ:16-12-2008 ರಂದು ತಕ್ಷೀರಿನಲ್ಲಿ ವಶಪಡಿಸಿಕೊಂಡ 100 ಎಂ.ಎಲ್.ನ 1000 ಸಾರಾಯಿ ಸ್ಯಾಚೆಟ್‌ಗಳನ್ನು (ರಾಸಾಯನಿಕ ಪರೀಕ್ಷೆಗಾಗಿ ತೆಗೆದ 100 ಎಂ.ಎಲ್.ನ 4 ಸಾರಾಯಿ ಸ್ಯಾಚೆಟ್‌ಗಳನ್ನು ಹೊರತುಪಡಿಸಿ) ಮತ್ತು ಅಕ್ರಮ ಸಾರಾಯಿ ಸಾಗಾಟಕ್ಕೆ ಉಪಯೋಗಿಸಿದ ಆಲ್ಟೊ ಕಾರು ಸಂಖ್ಯೆ:ಕೆಎಲ್–14–ಜಿ–5287 ನ್ನು ಮುಂದಿನ ಮುಟ್ಟುಗೋಲು ಪ್ರಕ್ರಿಯೆಗೆ ಸಂಬಂಧಿಸಿ ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ, ಪುತ್ತೂರು ಇವರಿಗೆ ಹಸ್ತಾಂತರಿಸಲು ಅನುಮತಿ ಆದೇಶ ನೀಡಬೇಕೆಂದು ಕೋರಿರುತ್ತಾರೆ. ಈ ಪ್ರಾಧಿಕಾರದ ಆದೇಶ ಸಮ ಸಂಖ್ಯೆ ದಿ:2-1-2009 ರ ಆದೇಶದಲ್ಲಿ, ತಕ್ಷೀರಿನಲ್ಲಿ ವಶಪಡಿಸಿಕೊಂಡ ಆಲ್ಟೊ ಕಾರು ಹಾಗೂ ಸಾರಾಯಿ ಸ್ಯಾಚೆಟ್‌ಗಳನ್ನು ಮುಂದಿನ ಸೂಕ್ತ ಕ್ರಮಕ್ಕಾಗಿ ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ, ಪುತ್ತೂರು ಇವರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿದ್ದು, ಸದರಿ ಆದೇಶದಂತೆ ಪೊಲೀಸ್ ಉಪ ನಿರೀಕ್ಷಕರು, ಪುತ್ತೂರು ನಗರ ಪೊಲೀಸ್ ಠಾಣೆ, ಪುತ್ತೂರು ಇವರು ದಿ:4-2-2009 ರಂದು ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ ಇವರಿಗೆ ತಕ್ಷೀರಿನಲ್ಲಿ ವಶಪಡಿಸಿಕೊಂಡ ಆಲ್ಟೊ ಕಾರು ಹಾಗೂ ಸಾರಾಯಿ ಸ್ಯಾಚೆಟ್‌ಗಳನ್ನು ಮುಂದಿನ ಸೂಕ್ತ ಕ್ರಮಕ್ಕಾಗಿ ಹಸ್ತಾಂತರಿಸಿರುತ್ತಾರೆ.

ತಕ್ಷೀರಿನಲ್ಲಿ ವಶಪಡಿಸಿಕೊಂಡ ಆಲ್ಟೊ ಕಾರು ಸಂಖ್ಯೆ:ಕೆಎ–14–ಜಿ–5287 ರ ಆರ್.ಸಿ. ಮಾಲೀಕರಾದ ಶ್ರೀ.ಬಶೀರ್.ಎಂ, ಬಿನ್: ಮಹಮ್ಮದ್.ಎಂ(35 ವ), ವಾಸ: ಡೋರ್ ನಂ:1-23 2, ಚೆಂಗುಳ ಪಂಚಾಯತ್,ಕಾಸರಗೋಡು, ಕೇರಳ ಇವರು ತಮ್ಮ ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ದಿ: 26-3 -2009 ಮತ್ತು ದಿ:25-5-2009 ರಂದು ಅರ್ಜಿ ಸಲ್ಲಿಸಿ, ಸದರಿ ಅರ್ಜಿಯಲ್ಲಿ, ತಕ್ಷೀರಿನಲ್ಲಿ ವಶಪಡಿಸಿಕೊಂಡ ಆಲ್ಟೊ ಕಾರನ್ನು ತನಗೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಬೇಕೆಂದು ತಮ್ಮ ಅರ್ಜಿಯಲ್ಲಿ ಕೋರಿರುತ್ತಾರೆ.

ಆರ್.ಸಿ. ಮಾಲೀಕರಾದ ಶ್ರೀ.ಬಶೀರ್.ಎಂ ಇವರ ಅರ್ಜಿಯನ್ನು ಮುಂದಿನ ತನಿಖೆಗಾಗಿ ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ ಇವರಿಗೆ ಕಳುಹಿಸಲಾಗಿದ್ದು, ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ ಇವರ ತನಿಖಾ ವರದಿ ಸಂಖ್ಯೆ: 43 /2008-09 ದಿ:12-6-2009 ವರದಿಯಲ್ಲಿ, ವಾಹನದ ಮೌಲ್ಯಮಾಪನದ ಬಗ್ಗೆ ಮೋಟಾರು ವಾಹನ ನಿರೀಕ್ಷಕರು, ಪುತ್ತೂರು ಇವರನ್ನು ಸಂಪರ್ಕಿಸಲಾಗಿದ್ದು, ಮೋಟಾರು ವಾಹನ ನಿರೀಕ್ಷಕರು ಪುತ್ತೂರು ಇವರ ಪತ್ರ ಸಂಖ್ಯೆ ದಿ:16-6-2009 ರ ವರದಿಯಲ್ಲಿ, ವಾಹನದ ಈಗಿನ ಮಾರುಕಟ್ಟೆ ಮೌಲ್ಯ ರೂ.80,000/– ಗಳಾಗಬಹುದೆಂದು ದೃಢೀಕರಣ ಪತ್ರ ನೀಡಿರುತ್ತಾರೆ.

ವಾಹನದ ಆರ್.ಸಿ. ಮಾಲೀಕರಾದ ಶ್ರೀ.ಬಶೀರ್.ಎಂ ಮತ್ತು ಇದರ ಫೈನಾನ್ಸ್‌ರಾದ ಮಹೇಂದ್ರ ಅಂಡ್ ಮಹೇಂದ್ರ ಫೈನಾನ್ಸಿಯರ್ ಲಿಮಿಟೆಡ್, ತ್ರಿಕ್ಕಕಾರ ಪೋಸ್ಟ್, ಕೇರಳ ಹಾಗೂ ಅವರ ಪರ ವಕೀಲರಿಗೆ ಕರ್ನಾಟಕ ಅಬಕಾರಿ ಕಾಯಿದೆ ಕಲಂ 43 (ಬಿ) ಪ್ರಕಾರ ಕಾರಣ ಕೇಳಿ ನೋಟೀಸನ್ನು ಈ ಪ್ರಾಧಿಕಾರದಿಂದ ದಿ:10-8-2009 ರಂದು ನೋಂದಣಿ ಅಂಚೆ ಮೂಲಕ ನೀಡಲಾಗಿದ್ದು, ಸದರಿ ನೋಟೀಸಿಗೆ ಆರ್.ಸಿ. ಮಾಲೀಕರು ಅವರ ಪರ ವಕೀಲರ ಮುಖಾಂತರ ದಿ:9-9-2009 ರಂದು ಉತ್ತರವನ್ನು ಸಲ್ಲಿಸಿರುತ್ತಾರೆ ಹಾಗೂ ವಾಹನ ಆಲ್ಟೊ ಕಾರು ಸಂಖ್ಯೆ: ಕೆಎಲ್–14–ಜಿ–5287 ಕ್ಕೆ ವಾಹನ ನಿರೀಕ್ಷಕರು

ದೃಢೀಕರಿಸಿದ ಮೌಲ್ಯಕ್ಕೆ ಅನುಗುಣವಾಗಿ ರೂ.80,000/– ಮೌಲ್ಯದ ಬ್ಯಾಂಕ್ ಗ್ಯಾರಂಟಿಯನ್ನು ಯಾವುದೇ ಸ್ಥಳೀಯ ಬ್ಯಾಂಕ್‌ನಿಂದ ಪಡೆದು ಈ ಪ್ರಾಧಿಕಾರಕ್ಕೆ ಒಪ್ಪಿಸಿದಲ್ಲಿ, ತಕ್ಷೀರಿನಲ್ಲಿ ವಶಪಡಿಸಿಕೊಂಡ ಆಲ್ಟೊ ಕಾರನ್ನು ಅರ್ಜಿದಾರರ ವಶಕ್ಕೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಲಾಗಬಹುದೆಂದು ದಿ:6-10-2009 ರಂದು ಆರ್.ಸಿ. ಮಾಲೀಕರಿಗೂ ಹಾಗೂ ಅವರ ಪರ ವಕೀಲರಿಗೆ ನೋಟೀಸುಗಳನ್ನು ನೀಡಿದರೂ, ಇದುವರೆಗೂ ಯಾವುದೇ ಬ್ಯಾಂಕ್ ಗ್ಯಾರಂಟಿಯನ್ನು ಮತ್ತು ಉತ್ತರವನ್ನು ಸಲ್ಲಿಸಿರುವುದಿಲ್ಲ.

ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ, ಪುತ್ತೂರು ಇವರ ತನಿಖಾ ವರದಿ ಸಂಖ್ಯೆ: ಆರ್‌ಸಿಆರ್/43 /2008-09 ದಿ:2-7-2009 ರ ವರದಿಯಲ್ಲಿ, ತಕ್ಷೀರಿನಲ್ಲಿ ವಶಪಡಿಸಿಕೊಂಡ ಸಾರಾಯಿ ಸ್ಯಾಚೆಟ್‌ಗಳಿಂದ ತೆಗೆದ ಸ್ಯಾಂಪಲ್‌ಗಳನ್ನು ಸಹಾಯಕ ಪೊಲೀಸ್ ಅಧೀಕ್ಷಕರು, ಪುತ್ತೂರು ಉಪ ವಿಭಾಗ, ಪುತ್ತೂರು ಇವರು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ರಾಸಾಯನಿಕ ವಿಶ್ಲೇಷಕರು, ದ.ಕ.ಜಿಲ್ಲೆ, ಮಂಗಳೂರು ಇವರ ಪತ್ರ ಸಂ:ಇ–1 ದಿ:3 -2-2009 ರ ವರದಿಯಲ್ಲಿ, ಸಾರಾಯಿಯ ಮದ್ಯಸಾರ ಪ್ರಮಾಣ ಶೇ.26 ಇದ್ದು, ಸಾರಾಯಿಯು ಮಾನವನ ಸೇವನೆಗೆ ಯೋಗ್ಯವಲ್ಲವೆಂದು ದೃಡೀಕರಣ ಪತ್ರ ನೀಡಿರುತ್ತಾರೆ. ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಸಾರಾಯಿಯ ಸೊತ್ತುಗಳ ಬಗ್ಗೆ ಯಾರೊಬ್ಬರೂ ಬೇಡಿಕೆ ಅರ್ಜಿ ಸಲ್ಲಿಸಿರುವುದಿಲ್ಲ. ಪ್ರಕರಣದಲ್ಲಿ ಜಪ್ತಾದ ಸೊತ್ತುಗಳ ಪೈಕಿ ಆಲ್ಟೊ ಕಾರನ್ನು ಹೊರತುಪಡಿಸಿ ಉಳಿದ ಸಾರಾಯಿ ಸ್ಯಾಚೆಟ್‌ಗಳನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಬೇಕೆಂದು ಶಿಫಾರಸ್ಸು ಮಾಡಿರುತ್ತಾರೆ.

ಅಬಕಾರಿ ನಿರೀಕ್ಷಕರ ಶಿಫಾರಸ್ಸಿನ ಮೇರೆಗೆ ವಶಪಡಿಸಿಕೊಂಡ ಸಾರಾಯಿ ಸ್ಯಾಚೆಟ್‌ಗಳ ಪೈಕಿ ರಾಸಾಯನಿಕ ವಿಶ್ಲೇಷಣೆಗೆ ತೆಗೆದ ಸಾರಾಯಿಯನ್ನು ಹೊರತುಪಡಿಸಿ ಉಳಿದ ಸಾರಾಯಿಯನ್ನು ಈ ಪ್ರಾಧಿಕಾರದ ಆದೇಶ ಸಮ ಸಂಖ್ಯೆ ದಿ:8-7-2009 ರಂದು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಆದೇಶ ನೀಡಲಾಗಿರುತ್ತದೆ.

ನಂತರ ಪ್ರಕರಣದ ವಿಚಾರಣೆಯನ್ನು ಆರಂಭಿಸಿ, ಈ ಪ್ರಕರಣದಲ್ಲಿ ಈ ಕೆಳಗಿನಂತೆ ವಿವಾದಾಂಶಗಳು ಉದ್ಭವಿಸುತ್ತದೆ.

1) ಮೊದಲನೇ ವಿವಾದಾಂಶ: ದಿ:11-12-2008 ರಂದು ಆಲ್ಟೊ ಕಾರು ಸಂಖ್ಯೆ: ಕೆಎಲ್–14–ಜಿ–5287 ರಲ್ಲಿ ಅಕ್ರಮವಾಗಿ ಸಾರಾಯಿ ಸ್ಯಾಚೆಟ್‌ಗಳ ಸಾಗಾಣಿಕೆಯಾಗಿದೆಯೇ? ಮತ್ತು ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ ಮತ್ತು ನಿಯಮಗಳ ರೀತ್ಯಾ ಉಲ್ಲಂಘನೆಗೆ ಬಳಸಲಾಗಿದೆಯೇ?

2) ಎರಡನೇ ವಿವಾದಾಂಶ: ಸದರಿ ವಾಹನದಲ್ಲಿ ಅಕ್ರಮವಾಗಿ ಸಾರಾಯಿ ಸ್ಯಾಚೆಟ್‌ಗಳು ಸಾಗಾಣಿಕೆಯಾಗಿರುವುದರ ಬಗ್ಗೆ ವಾಹನ ಮಾಲೀಕರಿಗೆ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೆ ನಡೆದಿದೆ ಹಾಗೂ ಇದರ ಬಗ್ಗೆ ಅವರು ಸಾಕಷ್ಟು ಮುಂಜಾಗ್ರತ ಕ್ರಮವನ್ನು ಕೈಗೊಳ್ಳಲಾಗಿತ್ತು ಎಂಬ ಅಂಶವನ್ನು ಆರೋಪಿಗಳು ಮತ್ತು ವಾಹನ ಮಾಲೀಕರು ಈ ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲವೇ?

3 ) ಮೂರನೇ ವಿವಾದಾಂಶ: ಜಪ್ತುಪಡಿಸಲಾದ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ಅಥವಾ ಇಲ್ಲವೇ?

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ: 1**

ಪ್ರಾಸಿಕ್ಯೂಶನ್ ಪರ ಪ್ರಕರಣದ ಫಿರ್ಯಾದುದಾರರು ಹಾಗೂ ತನಿಖಾಧಿಕಾರಿಯಾದ ಶ್ರೀ.ಶ್ರೀಕಾಂತ್.ಕೆ, ಪೊಲೀಸ್ ನಿರೀಕ್ಷಕರು, ಪುತ್ತೂರು ನಗರ ಪೊಲೀಸ್ ಠಾಣೆ, ಪುತ್ತೂರು ಇವರು ಇವರು ದಿ:16-2-2010 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಎ.ಡಿ.ಪಿ.ಯವರ ಮುಖ್ಯ ವಿಚಾರಣೆಗೆ ಉತ್ತರವನ್ನು ನೀಡುತ್ತಾ,ತಾನು ದಿ:10-12-2008 ರಂದು ಪುತ್ತೂರು ಪೊಲೀಸ್ ಅಧೀಕ್ಷಕರಿಗೆ ದೊರೆತ ಖಚಿತ ವರ್ತಮಾನದ ಮೇರೆಗೆ ಅಕ್ರಮ ಸಾರಾಯಿ ಸ್ಯಾಚೆಟ್‌ಗಳ ಸಾಗಾಟದ ಬಗ್ಗೆ ಸದರಿಯವರು ಸದರಿ ಅಪರಾಧ ಪತ್ತೆ ಹಚ್ಚಲು ಮೂರು ತಂಡಗಳನ್ನು ರಚಿಸಿದ್ದು,ತಾನು ಎರಡನೇ ತಂಡದ ಸಿಬ್ಬಂದಿಯಾಗಿದ್ದು,ದಿ:11-12-2008 ರಂದು ಪುತ್ತೂರು ನಗರ ಯೂನಿಟ್ ಹೋಟೇಲ್ ಜಂಕ್ಷನ್ ಬಳಿ ರಸ್ತೆಗಾವಲು ನಡೆಸುತ್ತಿರುವಾಗ ಕಬಕ ಕಡೆಯಿಂದ ಪುತ್ತೂರು ಬೈಪಾಸ್ ರಸ್ತೆ ಕಡೆ ಒಂದು ಆಲ್ಟೋ ಕಾರು ಬರುತ್ತಿರುವುದನ್ನು ಕಂಡು, ತಮ್ಮ ಮೂರನೇ ತಂಡದವರು ಸದರಿ ಕಾರನ್ನು ಬೆನ್ನಟ್ಟಿ 200 ಮೀಟರ್ ದೂರದಲ್ಲಿ ತಡೆದು ನಿಲ್ಲಿಸಿ ಪರಿಶೀಲಿಸಿದಾಗ, ಸದರಿ ಕಾರಿನಲ್ಲಿ ಸಾರಾಯಿ ತುಂಬಿದ ಸ್ಯಾಚೆಟ್‌ಗಳನ್ನು ಸಾಗಿಸಿರುವುದು ಕಂಡು ಬಂದ ಮೇರೆಗೆ, ಆ ಸಮಯದಲ್ಲಿ ಪಾಣಾಜೆಯಲ್ಲಿದ್ದ ತಾನು ತನ್ನ ತಂಡದ ಮಾಹಿತಿ ಮೇರೆಗೆ ತನ್ನ ಜೊತೆ ಇದ್ದ ಪಂಚರ ಜೊತೆ ಸದರಿ ಕಾರನ್ನು ನಿಲ್ಲಿಸಿದ ಸ್ಥಳಕ್ಕೆ ಬಂದು ನೋಡಿದಾಗ, ಅದು ಕೆಎಲ್–14–ಜಿ–5287 ನೋಂದಣಿ ಸಂಖ್ಯೆಯ ಬಿಳಿ ಬಣದ ಆಲ್ಟೊ ಕಾರು ಆಗಿದ್ದು, ಅದರೊಳಗೆ 3 ಜನರಿದ್ದು, ಕಾರಿನೊಳಗೆ 2 ಬಿಳಿ ಬಣ್ಣದ ಪಾಲಿಥಿನ್ ಗೋಣಿ ಚೀಲಗಳಲ್ಲಿ ಸಾರಾಯಿ ತುಂಬಿದ ತೊಟ್ಟೆಗಳು ಕಂಡು ಬಂದಿದ್ದು, ಈ ಬಗ್ಗೆ ವಿಚಾರಿಸಿದಾಗ, ಪ್ರೀತಿಪಾಲ್ ಎಂಬಾತನು ತಮ್ಮನ್ನು ಕಬಕಕ್ಕೆ ಬರಲು ಹೇಳಿ, ಅಲ್ಲಿದ್ದ ಸಾರಾಯಿ ಸ್ಯಾಚೆಟ್‌ಗಳನ್ನು ತಮ್ಮ ಕಾರಿಗೆ ಲೋಡ್ ಮಾಡಿ ಕೇರಳಕ್ಕೆ ಸಾಗಿಸಲು ತಿಳಿಸಿದ ಮೇರೆಗೆ ತಾವು ಹೋಗಿರುವುದಾಗಿ, ಪೊಲೀಸರು ಅವರನ್ನು ನಿಲ್ಲಿಸಿದ ಬಗ್ಗೆ ಸದರಿಯವರ ಮಾಹಿತಿ ನೀಡಿದ್ದು, ಸಾರಾಯಿ ಕೊಂಡುಹೋಗಲು ಪರವಾನಿಗೆ ಇದೆಯೇ ಎಂದು ವಿಚಾರಿಸಿದಾಗ, ಅದು ಯಾವುದೂ ಇಲ್ಲವೆಂದು ತಿಳಿಸಿದಾಗ, ಇದು ಅಕ್ರಮ ಸಾರಾಯಿ ಸಾಗಾಟ ಎಂದು ಖಚಿತಪಡಿಸಿ, ಸದರಿ ಗೋಣಿ ಚೀಲಗಳನ್ನು ಪರಿಶೀಲಿಸಿದಾಗ, ಅದರಲ್ಲಿ 100 ಎಂ.ಎಲ್.ನ 1000 ಸಾರಾಯಿ ಸ್ಯಾಚೆಟ್‌ಗಳಿರುವುದು ಕಂಡು ಬಂತು. ಇವುಗಳ ಪೈಕಿ 4 ಸಾರಾಯಿ ಸ್ಯಾಚೆಟ್‌ಗಳನ್ನು ರಾಸಾಯನಿಕ ಪರೀಕ್ಷೆಗಾಗಿ ತೆಗೆದಿರಿಸಿ, ಅದಕ್ಕೆ ಬಿಳಿ ಬಟ್ಟೆ ಪ್ಯಾಕ್ ಮಾಡಿ ಮೊಹರು ಕ್ರಮ ಜರುಗಿಸಿ, ಸದರಿ ಎಲ್ಲಾ ಸಾರಾಯಿ ಸ್ಯಾಚೆಟ್‌ಗಳನ್ನು ಮತ್ತು ಸಾಗಾಣಿಕೆಗೆ ಉಪಯೋಗಿಸಿದ 3 ಜನ ಆರೋಪಿಗಳನ್ನು ಮತ್ತು ಸಾಗಾಟಕ್ಕೆ ಬಳಸಿದ ಆಲ್ಟೊ ಕಾರನ್ನು ಇಲಾಖಾ ವಶಕ್ಕೆ ತೆಗೆದುಕೊಂಡು ಸ್ಥಳದಲ್ಲಿಯೇ ಮಹಜರು ಜರುಗಿಸಿರುತ್ತೇನೆ. ಮಹಜರಿನ ಪ್ರತಿಯನ್ನು ನಿಶಾನೆ ಪಿ–1 ಎಂದು,ಅದರಲ್ಲಿರುವ ತನ್ನ ಸಹಿಯನ್ನು ನಿಶಾನೆ ಪಿ–1A ಎಂದು ಗುರುತಿಸಲಾಯಿತು. ನಂತರ ಸೊತ್ತುಗಳು, ದಾಖಲೆ ಪತ್ರಗಳು ಹಾಗೂ ಆರೋಪಿಗಳ ಜೊತೆಗೆ ಠಾಣೆಗೆ ಬಂದು, ಈ ಬಗ್ಗೆ ಲಿಖಿತ ದೂರನ್ನು ತಯಾರಿಸಿರುತ್ತೇನೆ. ಅದನ್ನು ನಿಶಾನೆ ಪಿ–2 ಎಂದು, ಅದರಲ್ಲಿರುವ ತನ್ನ ಸಹಿಯನ್ನು ನಿಶಾನೆ ಪಿ–2ಎ ಎಂದು ಗುರುತಿಸಲಾಯಿತು. ಆರೋಪಿಗಳ ವಿರುದ್ಧ ತಕ್ಷೀರು ಸಂಖ್ಯೆ: 211/2008 ರಂತೆ ಪ್ರಕರಣವನ್ನು ನೋಂದಾಯಿಸಿ ಮೂಲ ದಾಖಲಾತಿಗಳೊಂದಿಗೆ ನ್ಯಾಯಾಲಯಕ್ಕೆ ಸಲ್ಲಿಸಿರುತ್ತೇನೆ. ಪ್ರಥಮ ಮಾಹಿತಿ ವರದಿಯನ್ನು ನಿಶಾನೆ ಪಿ–3 ಎಂದು, ಅದರಲ್ಲಿರುವ ತನ್ನ ಸಹಿಯನ್ನು ನಿಶಾನೆ ಪಿ–3 ಎ ಎಂದು ಗುರುತಿಸಲಾಯಿತು. ದಸ್ತಗಿರಿಯಾದ 3 ಆರೋಪಿಗಳ ಬಗ್ಗೆ ದಸ್ತಗಿರಿ ನಿಯಮ ಪಾಲಿಸಿ ವಿಚಾರಣೆಗೆ

ಒಳಪಡಿಸಿ ರಿಮಾಂಡ್ ಅರ್ಜಿಯೊಂದಿಗೆ ಹಾಜರುಪಡಿಸಿರುತ್ತೇನೆ. ಸ್ವಾಧೀನಪಡಿಸಿದ ಸೊತ್ತುಗಳನ್ನು ಸೊತ್ತುಗಳ ಪಟ್ಟಿ ಮುಖೇನ ಮಾನ್ಯ ನ್ಯಾಯಾಲಯಕ್ಕೆ ವರದಿ ಮಾಡಿ ವಾಹನ ಹಾಗೂ ಮಾದರಿಗೆ ತೆಗೆದ ಸ್ಯಾಂಪಲ್‌ಗಳನ್ನು ಹೊರತುಪಡಿಸಿ ಇನ್ನಿತರ ಸೊತ್ತುಗಳನ್ನು ಈ ಪ್ರಾಧಿಕಾರಕ್ಕೆ ಕಳುಹಿಸಿಕೊಡಲು ಮಾನ್ಯ ನ್ಯಾಯಾಲಯದಿಂದ ಅನುಮತಿಯನ್ನು ಪಡೆದಿರುತ್ತೇನೆ. ಸೊತ್ತುಗಳ ಪಟ್ಟಿಯನ್ನು ನಿಶಾನೆ ಪಿ–4 ಎಂದು,ಅದರಲ್ಲಿರುವ ತನ್ನ ಸಹಿಯನ್ನು ನಿಶಾನೆ ಪಿ–4ಎ ಎಂದು ಗುರುತಿಸಲಾಯಿತು. ಮಾದರಿಗಾಗಿ ತೆಗೆದ ಸಾರಾಯಿ ಸ್ಯಾಂಪಲ್‌ಗಳನ್ನು ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಿದ್ದು, ಇವರಿಂದ ದಿ:29-3 -2009 ರಂದು ರಾಸಾಯನಿಕ ವಿಶ್ಲೇಷಣೆಯ ವರದಿ ಪಡೆದಿದ್ದು, ಸದರಿ ವರದಿಯಲ್ಲಿ ಮದ್ಯಸಾರದ ಅಂಶವಿರುವುದು ಪತ್ತೆಯಾಗಿರುತ್ತದೆ. ಸದರಿ ವರದಿಯನ್ನು ನಿಸಾನೆ ಪಿ–5 ಎಂದು ಗುರುತಿಸಲಾಯಿತು. ಪ್ರಕರಣದ ತನಿಖೆಯನ್ನು ಪೊಲೀಸ್ ಉಪ ನಿರೀಕ್ಷಕರು ನಡೆಸಿದ್ದು, ಆರೋಪಿಗಳ ವಿರುದ್ಧ ಆಪಾದನೆ ಪಟ್ಟಿ ಸಲ್ಲಿಸಿರುತ್ತಾರೆ. ತಕ್ಷೀರು ಪತ್ತೆ ಸಮಯದಲ್ಲಿ ವಾಹನದ ಮಾಲೀಕರು ಹಾಗೂ ಚಾಲಕರು ಸದರಿ ವಾಹನದಲ್ಲಿ ಅಬಕಾರಿ ತಕ್ಷೀರು ನಡೆಯದಂತೆ ಯಾವುದೇ ಮುಂಜಾಗ್ರತ ಕ್ರಮ ತೆಗೆದುಕೊಂಡಿರುವ ಬಗ್ಗೆ ತಮ್ಮ ಗಮನಕ್ಕೆ ಬಂದಿರುವುದಿಲ್ಲ. ಆದುದರಿಂದ ಇದು ಅಕ್ರಮ ಸಾರಾಯಿ ಸಾಗಾಟ ಖಚಿತವಾಗಿರುವುದರಿಂದ, ತಕ್ಷೀರಿನಲ್ಲಿ ವಶಪಡಿಸಿಕೊಂಡ ಆಲ್ಟೊ ಕಾರನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿಗೊಳಿಸಲು ಆದೇಶ ನೀಡಬೇಕೆಂದು ಈ ಮೂಲಕ ಸಾಕ್ಷಿ ನುಡಿದಿರುತ್ತಾರೆ.

ಅರ್ಜಿದಾರರ ಪಾಟೀ ಸವಾಲಿಗೆ ಉತ್ತರಿಸುತ್ತಾ, ತಕ್ಷೀರು ಪತ್ತೆಯ ಸಮಯದಲ್ಲಿ ವಾಹನವನ್ನು ಲತೀಫ್ ಎಂಬುವವರು ಚಲಾಯಿಸುತ್ತಿದ್ದು, ಲತೀಫ್‌ನ ಅಣ್ಣನೇ ವಾಹನದ ಆರ್.ಸಿ. ಮಾಲೀಕನೆಂದು ತಿಳಿಸಿರುತ್ತೇನೆ. ತಾನು ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆಂದರೆ ಸರಿಯಲ್ಲವೆಂದು ಸಾಕ್ಷಿ ನುಡಿದಿರುತ್ತಾರೆ. ಇದರಿಂದ ಆರ್.ಸಿ. ಮಾಲೀಕರಿಗೆ ತನ್ನ ವಾಹನದಲ್ಲಿ ಸಾರಾಯಿ ಸಾಗಾಟವಾಗಿರುವುದಿಲ್ಲವೆಂದು ಯಾವುದೇ ಅಧಿಕೃತ ದಾಖಲಾತಿಗಳೊಂದಿಗೆ ದೃಢಪಡಿಸಲು ಸಾಧ್ಯವಾಗಿರುವುದಿಲ್ಲವಾದ ಕಾರಣ ಅರ್ಜಿದಾರರಿಗೆ ಯಾವುದೇ ಪ್ರಯೋಜನಕಾರಿಯಾಗಿರುವುದಿಲ್ಲ.

**ಪ್ರಾ.ಸಾ: 2**

ಶ್ರೀ.ಶಿವ ಪ್ರಸಾದ್, ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ, ಪುತ್ತೂರು ಇವರು ದಿ:16-02-2010 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಎ.ಡಿ.ಪಿ.ಯವರ ಮುಖ್ಯ ವಿಚಾರಣೆಗೆ ಉತ್ತರವನ್ನು ನೀಡುತ್ತಾ, ಈ ಪ್ರಾಧಿಕಾರದ ಆದೇಶದ ಮೇರೆಗೆ ಪ್ರಕರಣಕ್ಕೆ ಸಂಬಂಧಪಟ್ಟ ಸೊತ್ತುಗಳನ್ನು ಪುತ್ತೂರು ನಗರ ಪೊಲೀಸ್ ಠಾಣೆಯ ಪೊಲೀಸ್ ಉಪ ನಿರೀಕ್ಷಕರಿಂದ ಸಾರಾಯಿ ಸ್ಯಾಚೆಟ್‌ಗಳನ್ನು ಹಾಗೂ ಆಲ್ಟೊ ಕಾರನ್ನು ಹಾಗೂ ಇನ್ನಿತರ ದಾಖಲಾತಿಗಳೊಂದಿಗೆ ಹಸ್ತಾಂತರ ಪಡೆದುಕೊಂಡಿರುತ್ತೇನೆ. ವಾಹನದ ನೋಂದಣಿ ಬಗ್ಗೆ ಕೇರಳ ರಾಜ್ಯದ ಕಾಸರಗೋಡು ಜಿಲ್ಲೆ ಆರ್.ಟಿ.ಒ.ರವರಿಗೆ ಪತ್ರ ವ್ಯವಹಾರ ಮಾಡಲಾಗಿದ್ದು, ಸದರಿಯವರಿಂದ ಯಾವುದೇ ವರದಿ ಬಂದಿರುವುದಿಲ್ಲ. ತದನಂತರ ಪೊಲೀಸ್ ನಿರೀಕ್ಷಕರಿಂದ ಪಡೆದುಕೊಂಡಿರುತ್ತೇನೆ. ದಿ:2-7-2009 ರಂದು ತನಿಖೆ ಪೂರೈಸಿ ಈ ಪ್ರಾಧಿಕಾರಕ್ಕೆ ತನಿಖಾ ವರದಿಯನ್ನು ಸಲ್ಲಿಸಿರುತ್ತೇನೆ. ಸದರಿ ವರದಿಯನ್ನು ನಿಶಾನೆ ಪಿ–6 ಎಂದು, ಅದರಲ್ಲಿರುವ ತನ್ನ ಸಹಿಯನ್ನು ನಿಶಾನೆ ಪಿ–6ಎ ಎಂದು ಗುರುತಿಸಲಾಯಿತು. ಈ ಪ್ರಕರಣಕ್ಕೆ ಸಂಬಂಧಿಸಿದ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ವಿನಂತಿಸಿ ಸಾಕ್ಷಿ ನುಡಿದಿರುತ್ತಾರೆ.

ಅರ್ಜಿದಾರರ ಪಾಟೀ ಸವಾಲಿಗೆ ಉತ್ತರಿಸುತ್ತಾ, ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳಲು ಯಾವುದೇ ಆಧಾರಿತ ದಾಖಲಾತಿಗಳು ಇಲ್ಲವೆಂದರೆ ಸರಿಯಲ್ಲವೆಂದು ಉತ್ತರಿಸಿರುತ್ತಾರೆ.

ಪ್ರಕರಣದ ಪಿಡಬ್ಲ್ಯೂ–1 ಮತ್ತು ಪಿಡಬ್ಲ್ಯೂ–2 ರ ಸಾಕ್ಷಿ ವಿಚಾರಣೆಯಲ್ಲಿ ಅರ್ಜಿದಾರರ ಪಾಟೀ ಸವಾಲಿನ ಉತ್ತರಕ್ಕೆ ಅನುಗುಣವಾಗಿ ವಿಚಾರಣೆಯಲ್ಲಿ ಅರ್ಜಿದಾರರಿಗೆ ಯಾವುದೇ ಪ್ರಯೋಜನವಾಗಿರುವುದಿಲ್ಲ. ಪ್ರಕರಣದ ಫಿರ್ಯಾದುದಾರರು ಹಾಗೂ ತನಿಖಾಧಿಕಾರಿಯವರು ಪೂರಕವಾಗಿ ನೀಡಿರುವ ಸಾಕ್ಷ್ಯಾಧಾರದ ಮೇಲೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ದಿ:11-12-2008 ರಂದು ಜಪ್ತುಪಡಿಸಿಕೊಂಡಿರುವ ಆಲ್ಟೊ ಕಾರು ಸಂಖ್ಯೆ: ಕೆಎಲ್–14–ಜಿ–5287 ರಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೆ 100 ಎಂ.ಎಲ್.ನ 1000 ಸಾರಾಯಿ ಸ್ಯಾಚೆಟ್‌ಗಳನ್ನು ಕೇರಳ ರಾಜ್ಯಕ್ಕೆ ಸಾಗಾಣಿಕೆ ಮಾಡಿರುವುದು ಸಾಬೀತಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಅರ್ಜಿದಾರರಿಗೆ ಈ ಪ್ರಾಧಿಕಾರದಿಂದ ರಕ್ಷಣಾ ಸಾಕ್ಷಿಯನ್ನು ಹಾಜರುಪಡಿಸಲು ಹಲವಾರು ಬಾರಿ ಕಾಲಾವಕಾಶ ನೀಡಿದರೂ, ತಕ್ಷೀರಿಗೆ ಸಂಬಂಧಿಸಿದ ವಾಹನದ ಆರ್.ಸಿ. ಮಾಲೀಕರಾದ ಶ್ರೀ.ಬಶೀರ್.ಎಂ. ಹಾಗೂ ಅವರ ಪರ ವಕೀಲರು ಇದುವರೆಗೂ ಹಾಜರಾಗಿ ಯಾವುದೇ ರಕ್ಷಣಾ ಸಾಕ್ಷಿಯನ್ನು ಹಾಜರುಪಡಿಸಿರುವುದಿಲ್ಲ. ಇದರಿಂದ ಆಲ್ಟೊ ಕಾರು ಸಂಖ್ಯೆ: ಕೆಎಲ್–14–ಜಿ–5287 ರಲ್ಲಿ 100 ಎಂ.ಎಲ್.ನ 1000 ಸಾರಾಯಿ ಸ್ಯಾಚೆಟ್‌ಗಳನ್ನು ಕೇರಳ ರಾಜ್ಯಕ್ಕೆ ಸಾಗಿಸಲು ಆರ್.ಸಿ. ಮಾಲೀಕರು ಭಾಗಿಯಾಗಿರುವ ಬಗ್ಗೆ ಈ ಪ್ರಾಧಿಕಾರವು ಮನದಟ್ಟಾಗಿರುವುದರಿಂದ, ಸದರಿ ವಾಹನದಲ್ಲಿ ಅಕ್ರಮ ಸಾರಾಯಿ ಸ್ಯಾಚೆಟ್‌ಗಳನ್ನು ಸಾಗಿಸಿರುವುದು ಸಾಬೀತಾಗಿರುತ್ತದೆ.

ಆರ್.ಸಿ. ಮಾಲೀಕರಿಗೆ ಈ ಪ್ರಾಧಿಕಾರದಿಂದ ವಾಹನದ ಮೌಲ್ಯಕ್ಕೆ ಅನುಗುಣವಾಗಿ ರೂ.80,000/– ಮೌಲ್ಯದ ಬ್ಯಾಂಕ್ ಗ್ಯಾರಂಟಿಯನ್ನು ಈ ಪ್ರಾಧಿಕಾರಕ್ಕೆ ನೀಡಲು ದಿ:6-10-2009 ರಂದು ನೋಟೀಸು ನೀಡಿದರೂ ಯಾವುದೇ ಪ್ರತಿಕ್ರಿಯೆ ನೀಡಿರುವುದಿಲ್ಲ ಹಾಗೂ ಯಾವುದೇ ರಕ್ಷಣಾ ಸಾಕ್ಷಿಯನ್ನು ಹಾಜರುಪಡಿಸಿರುವುದಿಲ್ಲ. ಇದರಿಂದ ವಾಹನದ ಮಾಲೀಕರು ನ್ಯಾಯಾಲಯದ ವಿಚಾರಣೆಗೆ ಹಾಜರಾಗಿ ಸಾಕ್ಷಿ ಹೇಳಿಕೆ ನೀಡಲು ಉತ್ಸುಕರಾಗಿರುವುದಿಲ್ಲವೆಂದು ಈ ಪ್ರಾಧಿಕಾರಕ್ಕೆ ಮನದಟ್ಟಾಗಿರುತ್ತದೆ. ದಸ್ತಗಿರಿಯಾದ ಆರೋಪಿಗಳ ಹೇಳಿಕೆಗಳಲ್ಲಿ, ಸಾರಾಯಿ ಸ್ಯಾಚೆಟ್‌ಗಳನ್ನು ಅಕ್ರಮವಾಗಿ ಕೇರಳ ರಾಜ್ಯಕ್ಕೆ ಸಾಗಾಣಿಕೆ ಮಾಡಲು ತಮ್ಮ ಆಲ್ಟೊ ಕಾರನ್ನು ಉಪಯೋಗಿಸಿರುವುದು ಖಚಿತವಾಗಿರುತ್ತದೆ. ಪ್ರಾ.ಸಾ.1ರವರ ಸಾಕ್ಷಿ ಹೇಳಿಕೆಯಲ್ಲಿ, ಓಡಿ ಹೋದ ಚಾಲಕ ಲತೀಫ್ ಎಂಬಾತನಾಗಿದ್ದು, ಈತನ ಅಣ್ಣನೇ ತಕ್ಷೀರಿನಲ್ಲಿ ವಶಪಡಿಸಿಕೊಂಡ ಆಲ್ಟೊ ಕಾರಿನ ನೋಂದಣಿ ಮಾಲೀಕನಾಗಿರುತ್ತಾನೆ ಎಂದು ದೃಢಪಟ್ಟಿರುತ್ತದೆ. ಆದುದರಿಂದ ವಾಹನದ ಮಾಲೀಕರಾದ ಶ್ರೀ.ಬಶೀರ್.ಎಂ ಮತ್ತು ಆರೋಪಿಗಳು ಕೂಡಿಕೊಂಡು ತಮ್ಮ ಆಲ್ಟೊ ಕಾರಿನಲ್ಲಿ ಅಕ್ರಮವಾಗಿ ಸಾರಾಯಿ ಸ್ಯಾಚೆಟ್‌ಗಳನ್ನು ಸಾಗಾಟ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಆದುದರಿಂದ ದಿನಾಂಕ:11-12-2008 ರಂದು ಆಲ್ಟೊ ಕಾರು ಸಂಖ್ಯೆ:ಕೆಎಲ್–14–ಜಿ–5287 ನ್ನು ಯಾವುದೇ ರಹದಾರಿ ಪತ್ರವಿಲ್ಲದೆ ಅಕ್ರಮವಾಗಿ 100 ಎಂ.ಎಲ್.ನ 1000 ಸಾರಾಯಿ ಸ್ಯಾಚೆಟ್‌ಗಳ ಸಾಗಾಣಿಕೆಗೆ ಬಳಸಿರುವುದು ನಿಸ್ಸಂದೇಹವಾಗಿ ಸಾಬೀತಾಗಿರುತ್ತದೆ. ಈ ಮೇಲಿನ ಕಾರಣಗಳಿಂದ ಎರಡನೇ ಅಂಶವನ್ನು ನಕಾರಾತ್ಮಕವಾಗಿ ಪರಿಗಣಿಸಿದೆ.

ಮೇಲಿನ ಎಲ್ಲಾ ಕಾರಣಗಳಿಂದ ಫಿರ್ಯಾದುದಾರರು ಹಾಗೂ ತನಿಖಾಧಿಕಾರಿಗಳ ಮತ್ತು ಮಹಜರು ಸಾಕ್ಷಿಗಳ ವಿಚಾರಣೆ ಹಾಗೂ ರಾಸಾಯನಿಕ ವಿಶ್ಲೇಷಕರ ವರದಿ ಮತ್ತು ಲಭ್ಯವಿರುವ ದಾಖಲಾತಿಗಳಿಂದ, ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ಆಲ್ಟೊ ಕಾರು ಸಂಖ್ಯೆ:ಕೆಎಲ್–14–ಜಿ–5287 ನ್ನು ಅಕ್ರಮವಾಗಿ 100 ಎಂ.ಎಲ್.ನ 1000 ಸಾರಾಯಿ ಸ್ಯಾಚೆಟ್‌ಗಳನ್ನು ಸಾಗಾಟ ಮಾಡಲು ಬಳಸಲಾಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ, ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43 ಎ ರಡಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿ ಕಂಡು ಬಂದಿರುವುದರಿಂದ, ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ಆಲ್ಟೊ ಕಾರು ಸಂಖ್ಯೆ: ಕೆಎಲ್–14–ಜಿ–5287 ನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ/185/ಡಿಟಿಸಿಆರ್/2008-09 ದಿ: 3 1-07-2010**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಾಲಂ 43 (ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, ನಿಯಮ 43 (ಬಿ) ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಪೊಲೀಸ್ ನಿರೀಕ್ಷಕರು, ಪುತ್ತೂರು ನಗರ ಪೊಲೀಸ್ ಠಾಣೆ, ಪುತ್ತೂರು ಇವರ ತಕ್ಷೀರು ಸಂಖ್ಯೆ: 211/2008 ದಿನಾಂಕ:11-12-2008 ರಲ್ಲಿ ಜಪ್ತುಪಡಿಸಿರುವ ಆಲ್ಟೊ ಕಾರು ಸಂಖ್ಯೆ:ಕೆಎಲ್–14–ಜಿ–5287 ನ್ನು ನಿಯಮ 43 ಎ(2) ರನ್ವಯ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿ:31-07-2010 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ**

ಪ್ರಾ.ಸಾ: 1- ಶ್ರೀ.ಶ್ರೀಕಾಂತ್.ಕೆ, ಪೊಲೀಸ್ ನಿರೀಕ್ಷಕರು, ಪುತ್ತೂರು ನಗರ ಪೊಲೀಸ್ ಠಾಣೆ, ಪುತ್ತೂರು.

ಪ್ರಾ.ಸಾ: 2 - ಶ್ರೀ.ಶಿವ ಪ್ರಸಾದ್, ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ, ಪುತ್ತೂರು.

**ಅನುಬಂಧ–2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲಾತಿಗಳು**

ನಿಶಾನೆ ಪಿ–1 : ಮಹಜರ್ ಪ್ರತಿ

ನಿಶಾನೆ ಪಿ–1ಎ : ಮಹಜರ್‌ನಲ್ಲಿ ಫಿರ್ಯಾದುದಾರರ ಸಹಿ

ನಿಶಾನೆ ಪಿ–2 : ಲಿಖಿತ ದೂರಿನ ವರದಿ.

ನಿಶಾನೆ ಪಿ–2A : ಸದರಿ ವರದಿಯಲ್ಲಿ ಪ್ರಾ.ಸಾ.1ರವರ ಸಹಿ.

ನಿಶಾನೆ ಪಿ–3 : ಪ್ರಥಮ ಮಾಹಿತಿ ವರದಿ.

ನಿಶಾನೆ ಪಿ–3 A : ಸದರಿ ಪ್ರಥಮ ಮಾಹಿತಿ ವರದಿಯಲ್ಲಿ ಪ್ರಾ.ಸಾ.1ರವರ ಸಹಿ.

ನಿಶಾನೆ ಪಿ–4 : ಸೊತ್ತುಗಳ ಪಟ್ಟಿ.

ನಿಶಾನೆ ಪಿ–4A : ಸೊತ್ತುಗಳ ಪಟ್ಟಿಯಲ್ಲಿ ಪ್ರಾ.ಸಾ.1ರವರ ಸಹಿ.

ನಿಶಾನೆ ಪಿ–5 : ರಾಸಾಯನಿಕ ವಿಶ್ಲೇಷಣಾ ವರದಿ.

ನಿಶಾನೆ ಪಿ–6 : ಪ್ರಾ.ಸಾ.2ರವರ ತನಿಖಾ ವರದಿ.

ನಿಶಾನೆ ಪಿ–6A : ಸೊತ್ತುಗಳ ಪಟ್ಟಿಯಲ್ಲಿ ಪ್ರಾ.ಸಾ.1ರವರ ಸಹಿ.

**ಅನುಬಂಧ–3**

**ವಾಹನ ಮಾಲೀಕರ ಪರ ವಿಚಾರಣೆಗೆ ಸಲ್ಲಿಸಿದ ಸಾಕ್ಷಿದಾರರು:**

–ಇಲ್ಲ–

**ಅನುಬಂಧ–4**

**ವಾಹನ ಮಾಲೀಕರ ಪರವಾಗಿ ಗುರುತಿಸಲಾದ ಸಾಕ್ಷಿದಾರರು:**

–ಇಲ್ಲ–

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.1268

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಎಸ್‌ಡಿಕೆ/70/ಡಿಟಿಸಿಆರ್/2008-09 ದಿನಾಂಕ: 10-08-2010**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್

ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**

ಪೊಲೀಸ್ ಉಪ ನಿರೀಕ್ಷಕರು,
ಸುಳ್ಯ ಪೊಲೀಸ್ ಠಾಣೆ, ಸುಳ್ಯ.

**ಆರೋಪಿಗಳು:**

1. ಕೆ.ಪುಟ್ಟಣ್ಣ ಗೌಡ (35 ವ) ಬಿನ್: ರಾಮಣ್ಣ ಗೌಡ,
ವಾಸ: ವಾಟ್ ಕೇರಿ ಮನೆ,
ಐವರ್ನಾಡು ಗ್ರಾಮ, ಸುಳ್ಯ ತಾಲೂಕು.
2. ಆನಂದ (35 ವ),
ಬಿನ್:ಮುತ್ತಪ್ಪ ಗೌಡ, ಕಾಯರ್‌ತೋಡಿ ಮನೆ, ಸುಳ್ಯ ಕಸಬಾ ಗ್ರಾಮ, ಸುಳ್ಯ
(ಆಟೋರಿಕ್ಷಾ ಚಾಲಕ).

**ವಾಹನ ಮಾಲೀಕರು:**

ಶ್ರೀ.ಆನಂದ ಗೌಡ, ಬಿನ್:ಮುತ್ತಪ್ಪ ಗೌಡ,
ಕಾಯರ್‌ತೋಡಿ ಹೌಸ್, ಗಾಂಧಿನಗರ, ಸುಳ್ಯ.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:01-07-2008 ರಂದು ಸುಳ್ಯ ತಾಲೂಕು ಐವರ್ನಾಡು ಗ್ರಾಮದ ನಾಟೆಕೇರಿ ಎಂಬಲ್ಲಿರುವ ಪುಟ್ಟಣ್ಣ ಗೌಡರ ಅಂಗಡಿಯಲ್ಲಿ ಅಕ್ರಮವಾಗಿ ಮದ್ಯ ಸಾಗಾಟ ಮಾಡುತ್ತಿರುವ ಬಗ್ಗೆ ದೊರೆತ ಖಚಿತ ವರ್ತಮಾನದ ಮೇರೆಗೆ ಫಿರ್ಯಾದುದಾರರು ತನ್ನ ಸಿಬ್ಬಂದಿಯವರೊಂದಿಗೆ ಸದರಿ ಸ್ಥಳಕ್ಕೆ ತಪಾಸಣೆಗೆಂದು ಬಂದಾಗ, ಸದರಿ ಅಂಗಡಿ ಎದುರು ಆಟೋರಿಕ್ಷಾ ಸಂಖ್ಯೆ: ಕೆಎ–21–3 628 ದಕ್ಷಿಣಕ್ಕೆ ಮುಖ ಮಾಡಿ ನಿಂತಿದ್ದು, ಸದರಿ ಆಟೋರಿಕ್ಷಾದಿಂದ ಮದ್ಯ ತುಂಬಿದ ರಟ್ಟಿನ ಪೆಟ್ಟಿಗೆಗಳನ್ನು ತೆಗೆದು ಪುಟ್ಟಣ್ಣ ಗೌಡರ ಅಂಗಡಿಯ ಒಳಗಡೆ ದಾಸ್ತಾನು ಇಡುತ್ತಿದ್ದು, ರಾತ್ರಿ ಸುಮಾರು 8-15 ಗಂಟೆಗೆ ದಾಳಿ ನಡೆಸಿ ಪರಿಶೀಲಿಸಿದಾಗ, ಸದರಿ ಸ್ಥಳದಲ್ಲಿ ಸಿಮೆಂಟ್ ಕಟ್ಟೆಯಿದ್ದು, ಕಟ್ಟೆಯ ಮೇಲೆ 5 ರಟ್ಟಿನ ಪೆಟ್ಟಿಗೆಗಳನ್ನು ದಾಸ್ತಾನು ಇರಿಸಿದ್ದು, ಸದರಿ ರಟ್ಟಿನ ಪೆಟ್ಟಿಗೆಗಳ ಬಗ್ಗೆ ಪುಟ್ಟಣ್ಣ ಗೌಡರಲ್ಲಿ ಮತ್ತು ಆಟೋರಿಕ್ಷಾ ಚಾಲಕನಲ್ಲಿ ವಿಚಾರಿಸಲಾಗಿ, ಸದರಿ ರಟ್ಟಿನ ಪೆಟ್ಟಿಗೆಗಳಲ್ಲಿ ಮದ್ಯ ತುಂಬಿದ ಬಾಟಲ್‌ಗಳಿದ್ದು, ಅವುಗಳನ್ನು ಮಾರಾಟ ಮಾಡಲೆಂದು ತಂದಿರುವುದಾಗಿ ತಿಳಿಸಿದ ಮೇರೆಗೆ, ಸದರಿ ಮದ್ಯವನ್ನು ಸಾಗಾಟ ಮತ್ತು ದಾಸ್ತಾನಿಡಲು ರಹದಾರಿ ಅಥವಾ ಪರವಾನಿಗೆ ಇದೆಯೇ ಎಂದು ವಿಚಾರಿಸಿದಾಗ, ತಮ್ಮ ಬಳಿ ಯಾವುದೇ ರಹದಾರಿ, ಬಿಲ್ಲು ಅಥವಾ ಪರವಾನಿಗೆಗಳು ಇರುವುದಿಲ್ಲವೆಂದು ತಿಳಿಸಿರುವ ಮೇರೆಗೆ, ಅವರುಗಳ ಹೆಸರು ಮತ್ತು ವಿಳಾಸವನ್ನು ಕೇಳಲಾಗಿ ಕೆ.ಪುಟ್ಟಣ್ಣ ಗೌಡ(35 ವ) ಬಿನ್: ರಾಮಣ್ಣ ಗೌಡ, ವಾಸ: ವಾಟ್‌ಕೇರಿ ಮನೆ, ಐವರ್ನಾಡು ಗ್ರಾಮ, ಸುಳ್ಯ ತಾಲೂಕು ಎಂದು, ಸದರಿ ವ್ಯಕ್ತಿಯು ಅಂಗಡಿಯ ಮಾಲೀಕನಾಗಿರುತ್ತಾರೆಂದು ಮತ್ತು ಆಟೋರಿಕ್ಷಾದ ಚಾಲಕನ ಹೆಸರು ಆನಂದ (35 ವ), ಬಿನ್:ಮುತ್ತಪ್ಪ ಗೌಡ, ಕಾಯರ್‌ತೋಡಿ ಮನೆ, ಸುಳ್ಯ ಕಸಬಾ ಗ್ರಾಮ, ಸುಳ್ಯ ಎಂದು ತಿಳಿಸಿರುತ್ತಾರೆ. ಸದರಿ ರಟ್ಟಿನ ಪೆಟ್ಟಿಗೆಗಳನ್ನು ಪರಿಶೀಲಿಸಲಾಗಿ, ಮ್ಯಾಜಿಕ್ ಬ್ಲೆಂಡೆಡ್ ಫೈನ್ ವಿಸ್ಕಿ ಎಂದು ಬರೆದಿರುವ 180 ಎಂ.ಎಲ್.ನ ಮದ್ಯ ತುಂಬಿದ ತಲಾ ಒಂದು ರಟ್ಟಿನ ಪೆಟ್ಟಿಗೆಯಲ್ಲಿ 48 ಸೀಸೆಗಳಂತೆ ಒಟ್ಟು 4 ರಟ್ಟಿನ ಪೆಟ್ಟಿಗೆಗಳಲ್ಲಿ 192 ಬಾಟಲ್‌ಗಳಿದ್ದು, ಒಟ್ಟು 34-560 ಲೀಟರ್ ಮದ್ಯ ಪತ್ತೆಯಾದವು. ಸದರಿ ಒಂದೊಂದು ರಟ್ಟಿನ ಪೆಟ್ಟಿಗೆಯಿಂದ ರಾಸಾಯನಿಕ ಪರೀಕ್ಷೆಗಾಗಿ ಒಂದೊಂದು ಬಾಟಲ್‌ಗಳನ್ನು ಮಾದರಿಗಾಗಿ ತೆಗೆದು, ಅದಕ್ಕೆ ಬಿಳಿ ಬಟ್ಟೆಯಿಂದ ಸುತ್ತಿ ಎಸ್.ಹೆಚ್.ಒ. ಅರಗು ಸೀಲ್ ಹಾಕಿ ಪಂಚರ ಸಹಿಯಿರುವ ಚೀಟಿಯನ್ನು ಅಂಟಿಸಲಾಯಿತು. ನಂತರ ಮತ್ತೊಂದು ರಟ್ಟಿನ ಪೆಟ್ಟಿಗೆಯನ್ನು ಒರಿಜಿನಲ್ ಚಾಯ್ಸ್ ಡಿಲಕ್ಸ್ ವಿಸ್ಕಿ ಎಂದು ಬರೆದಿರುವ 180 ಎಂ.ಎಲ್.ನ ಮದ್ಯ ತುಂಬಿದ 48 ಸೀಸೆಗಳಿದ್ದು, ಒಟ್ಟು 8-640 ಲೀಟರ್ ಮದ್ಯ ಪತ್ತೆಯಾದವು. ಇವುಗಳ ಪೈಕಿ ಸದರಿ ಒಂದು ರಟ್ಟಿನ ಪೆಟ್ಟಿಗೆಯಿಂದ ಮಾದರಿಗಾಗಿ ಒಂದು ಬಾಟಲಿಯನ್ನು ತೆಗೆದು ಅದಕ್ಕೆ ಬಿಳಿ ಬಟ್ಟೆಯಿಂದ ಸುತ್ತಿ ಎಸ್.ಹೆಚ್.ಒ ಅರಗು ಸೀಲ್ ಹಾಕಿ ಪಂಚರ ಸಹಿ ಇರುವ ಚೀಟಿಯನ್ನು ಅಂಟಿಸಲಾಯಿತು. ನಂತರ ಸಾಗಾಟಕ್ಕೆ ಬಳಸಿದ ಆಟೋರಿಕ್ಷಾವನ್ನು ಪರಿಶೀಲಿಸಿದಾಗ, ಇದರ ನೋಂದಣಿ ಸಂ: ಕೆಎ–21-3628 ಆಗಿದ್ದು, ಸದರಿ ಮದ್ಯವನ್ನು ಆಟೋರಿಕ್ಷಾದಲ್ಲಿ ಸಾಗಿಸಿರುವುದು ಖಚಿತವಾಗಿರುವುದರಿಂದ, ಆರೋಪಿಗಳನ್ನು ಸ್ಥಳದಲ್ಲಿಯೇ ದಸ್ತಗಿರಿ ಮಾಡಿ ಅಕ್ರಮ 43-200 ಲೀಟರ್ ಮದ್ಯ ಮತ್ತು ಸಾಗಾಟಕ್ಕೆ ಬಳಸಿದ ಆಟೋರಿಕ್ಷಾವನ್ನು ಮುಂದಿನ ಸ್ವಾಧೀನಕ್ಕೆ ವಶಪಡಿಸಿಕೊಂಡು ಮಹಜರನ್ನು ಸ್ಥಳದಲ್ಲಿಯೇ ಬರೆದು, ಮಹಜರಿನಲ್ಲಿ ಪಂಚರ ಹಾಗೂ ಸಿಬ್ಬಂದಿಯವರ ಸಹಿ ಪಡೆದು ಆರೋಪಿಗಳ ವಿರುದ್ಧ ತಕ್ಷೀರು ಸಂ: 163 /2008 ದಿ:1-7-2008 ರಂದು ಮೊಕದ್ದಮೆ ದಾಖಲಿಸಿಕೊಂಡು ಮಾನ್ಯ ನ್ಯಾಯಾಲಯಕ್ಕೆ ಹಾಗೂ ತನ್ನ ಮೇಲಾಧಿಕಾರಿಗಳಿಗೆ ಮತ್ತು ಈ ಪ್ರಾಧಿಕಾರಕ್ಕೆ ವರದಿಯನ್ನು ಸಲ್ಲಿಸಿರುತ್ತಾರೆ.

ಪೊಲೀಸ್ ಉಪ ನಿರೀಕ್ಷಕರು, ಸುಳ್ಯ ಪೊಲೀಸ್ ಠಾಣೆ, ಸುಳ್ಯ ಇವರ ಪತ್ರ ಸಂಖ್ಯೆ ದಿ:6-9-2008 ರಲ್ಲಿ, ತಕ್ಷೀರಿನಲ್ಲಿ ವಶಪಡಿಸಿಕೊಂಡ ಸೊತ್ತುಗಳನ್ನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43 (ಎ) ರಡಿ ಮುಟ್ಟುಗೋಲು ಪ್ರಕ್ರಿಯೆ ನಡೆಸುವ ಬಗ್ಗೆ ಸದರಿ ಸೊತ್ತುಗಳನ್ನು ಅಬಕಾರಿ ನಿರೀಕ್ಷಕರು, ಸುಳ್ಯ ವಲಯ, ಸುಳ್ಯ ಇವರಿಗೆ ಹಸ್ತಾಂತರಿಸಲು ಅನುಮತಿ ನೀಡಬೇಕೆಂದು ಕೋರಿರುವ ಮೇರೆಗೆ ಈ ಪ್ರಾಧಿಕಾರದ ಆದೇಶ ಸಂಖ್ಯೆ: ಎಸ್‌ಡಿಕೆ /ಸಿಆರ್‌ಎಂ/70/2008-09 ದಿ:22-9-2008 ರ ಆದೇಶದಲ್ಲಿ, ತಕ್ಷೀರಿನಲ್ಲಿ ವಶಪಡಿಸಿಕೊಂಡ ಸೊತ್ತುಗಳನ್ನು ಅಬಕಾರಿ ನಿರೀಕ್ಷಕರು, ಸುಳ್ಯ ವಲಯ, ಸುಳ್ಯ ಇವರಿಗೆ ಹಸ್ತಾಂತರಿಸಲು ಹಾಗೂ ಪ್ರಕರಣದ ತನಿಖೆಯನ್ನು ಪೊಲೀಸ್ ಉಪ ನಿರೀಕ್ಷಕರು, ಸುಳ್ಯ ಪೊಲೀಸ್ ಠಾಣೆ, ಸುಳ್ಯ ಇವರು ಮುಂದುವರಿಸಿ ಆರೋಪಿಗಳ ವಿರುದ್ಧ ದೋಷಾರೋಪಣ ಪಟ್ಟಿಯನ್ನು ಘನ ನ್ಯಾಯಾಲಯದಲ್ಲಿ ಸಲ್ಲಿಸಲು ಅನುಮತಿ ನೀಡಿದೆ.

ತಕ್ಷೀರಿನಲ್ಲಿ ವಶಪಡಿಸಿಕೊಂಡ ಆಟೋರಿಕ್ಷಾ ಸಂಖ್ಯೆ: ಕೆಎ–21–3 628 ರ ಆರ್.ಸಿ. ಮಾಲೀಕರಾದ ಶ್ರೀ.ಆನಂದ ಗೌಡ, ಬಿನ್:ಮುತ್ತಪ್ಪ ಗೌಡ, ಕಾಯರ್‌ತೋಡಿ ಹೌಸ್, ಗಾಂಧಿನಗರ, ಸುಳ್ಯ ಇವರು ತಮ್ಮ ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ದಿ:28-7-2008 ರಂದು ಅರ್ಜಿ ಸಲ್ಲಿಸಿ, ಸದರಿ ಅರ್ಜಿಯಲ್ಲಿ, ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನ ಅಕ್ರಮ ಮದ್ಯ ಸಾಗಾಣಿಕೆಯಲ್ಲಿ ಭಾಗಿಯಾಗಿರುವುದಿಲ್ಲ. ತಮ್ಮ ವಾಹನದ ಮೇಲೆ ಸುಳ್ಳು ಮೊಕದ್ದಮೆಯನ್ನು ದಾಖಲಿಸಿ ಸದರಿ ಆಟೋರಿಕ್ಷಾವನ್ನು ವಶಪಡಿಸಿಕೊಂಡಿರುತ್ತಾರೆ. ತಕ್ಷೀರಿನಲ್ಲಿ ವಶಪಡಿಸಿಕೊಂಡ ಆಟೋರಿಕ್ಷಾವನ್ನು ತನಗೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಬೇಕೆಂದು ಕೋರಿರುತ್ತಾರೆ.

ಸದರಿ ವಾಹನ ಮಾಲೀಕರ ಅರ್ಜಿಯನ್ನು ಪರಿಶೀಲಿಸಿ ಈ ಪ್ರಾಧಿಕಾರವು ವಾಹನದ ಮೌಲ್ಯವನ್ನು ನಿರ್ಧರಿಸುವ ಸಲುವಾಗಿ ಪ್ರಾದೇಶಿಕ ಸಾರಿಗೆ ಅಧಿಕಾರಿ, ಪುತ್ತೂರು ಇವರಿಗೆ ದಿ:23 -9-2008 ರಂದು ಪತ್ರ ಬರೆಯಲಾಗಿದ್ದು, ಸದರಿ ಪತ್ರಕ್ಕೆ ಅನುಸಾರವಾಗಿ ಪ್ರಾದೇಶಿಕ ಸಾರಿಗೆ ಅಧಿಕಾರಿ,ಪುತ್ತೂರು,ದ.ಕ.ಜಿಲ್ಲೆ ಇವರ ಮೌಲ್ಯಮಾಪನ ದೃಢೀಕರಣ ಪತ್ರ ದಿ:7-10-2008 ರಂದು ಸದರಿ ವಾಹನದ ಪ್ರಸ್ತುತ ಮಾರುಕಟ್ಟೆಯ ಅಂದಾಜು ಮೌಲ್ಯ ರೂ.18,500/– ಎಂದು ಅಂದಾಜಿಸಿ ದೃಢೀಕರಣ ಪತ್ರ ನೀಡಿರುತ್ತಾರೆ. ಈ ಪ್ರಾಧಿಕಾರದ ನೋಟೀಸು ಸಂಖ್ಯೆ: ಎಸ್‌ಡಿಕೆ /70/ಡಿಟಿಸಿಆರ್/2008-09 ದಿ:20-10-2008 ರಂದು ವಾಹನ ಮಾಲೀಕರಾದ ಶ್ರೀ.ಆನಂದ ಗೌಡ ಇವರಿಗೆ ವಾಹನದ ಮೌಲ್ಯಮಾಪನ ಮೊತ್ತ ರೂ.18,500/– ಕ್ಕೆ ಸಮಾನವಾದ ಬ್ಯಾಂಕ್ ಗ್ಯಾರಂಟಿಯನ್ನು ಯಾವುದೇ ರಾಷ್ಟ್ರೀಕೃತ ಬ್ಯಾಂಕ್ ಶಾಖೆಯಿಂದ ಈ ಪ್ರಾಧಿಕಾರದ ಪರ ಪಡೆದು ಒಪ್ಪಿಸಲು ನೋಟೀಸು ನೀಡಲಾಗಿರುತ್ತದೆ. ಸದರಿ ನೋಟೀಸಿಗೆ ಅನುಗುಣವಾಗಿ ವಾಹನ ಮಾಲೀಕರು ದಿ:3 -11-2008 ರಂದು ಈ ಪ್ರಾಧಿಕಾರಕ್ಕೆ ಕೆನರಾ ಬ್ಯಾಂಕ್, ಸುಳ್ಯ ಇವರಿಂದ ರೂ.18,500/– ರ ಮೌಲ್ಯಕ್ಕೆ ಸಮಾನವಾದ ಬ್ಯಾಂಕ್ ಭದ್ರತೆ ಸಂಖ್ಯೆ:2/2008 ದಿ:25-10-2008 ರಂತೆ ಭದ್ರತಾ ಪತ್ರವನ್ನು ಒಪ್ಪಿಸಿ, ಅಷ್ಟೇ ಮೊತ್ತಕ್ಕೆ ಇಬ್ಬರು ಜಾಮೀನುದಾರರಾದ ಶ್ರೀ.ಕೊರಗಪ್ಪ ಮಣಿಯಾನಿ ಹಾಗೂ ಶ್ರೀ.ಮುತ್ತಪ್ಪ ಗೌಡ ಇವರಿಂದ ಸದರಿ ಮೊತ್ತಕ್ಕೆ ಬಾಂಡ್ ಪತ್ರ ಮತ್ತು ಸದರಿ ವ್ಯಕ್ತಿಗಳಿಂದ ಅಫಿಧಾವಿತ್‌ಗಳನ್ನು ಹಾಜರುಪಡಿಸಿರುತ್ತಾರೆ.

ವಾಹನದ ಮಾಲೀಕರು ತಕ್ಷೀರಿನಲ್ಲಿ ವಶಪಡಿಸಿಕೊಂಡ ಆಟೋರಿಕ್ಷಾ ಸಂಖ್ಯೆ: ಕೆಎ–21–3628 ರ ಮೌಲ್ಯಮಾಪನಕ್ಕೆ ಅನುಗುಣವಾಗಿ ಬ್ಯಾಂಕ್ ಭದ್ರತೆ ಹಾಗೂ ಅಷ್ಟೇ ಮೊತ್ತಕ್ಕೆ ಸಮಾನವಾದ ಇಬ್ಬರು ಜಾಮೀನುದಾರರನ್ನು ನೀಡಿರುವುದರಿಂದ, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ.ಜಿಲ್ಲೆ, ಮಂಗಳೂರು ಇವರ ಮಧ್ಯಂತರ ಆದೇಶ ಸಂಖ್ಯೆ: ಎಸ್‌ಡಿಕೆ/ಡಿಟಿಸಿಆರ್/70/2008-09 ದಿ:4-11-2008 ರಂದು ತಕ್ಷೀರಿನಲ್ಲಿ ವಶಪಡಿಸಿಕೊಂಡ ಆಟೋರಿಕ್ಷಾವನ್ನು ಅದರ ನೋಂದಣಿ ಮಾಲೀಕರಾದ ಶ್ರೀ.ಆನಂದ ಗೌಡ, ಸುಳ್ಯ ತಾಲೂಕು ಇವರಿಗೆ ಕೆಲವು ಷರತ್ತುಗಳನ್ವಯ ಆಟೋರಿಕ್ಷಾವನ್ನು ಮಧ್ಯಂತರ ಸುಪರ್ದಿಗೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಲಾಗಿರುತ್ತದೆ.

ವಾಹನದ ಮಾಲೀಕರಾದ ಶ್ರೀ.ಆನಂದ ಗೌಡ ಇವರಿಗೆ ಈ ಪ್ರಾಧಿಕಾರದಿಂದ ದಿನಾಂಕ: 20-1-2009 ರಂದು ಕರ್ನಾಟಕ ಅಬಕಾರಿ ಕಾಯಿದೆ ಕಲಂ 1965 ರ ಸೆಕ್ಷನ್ 43 (ಬಿ) ಪ್ರಕಾರ ಕಾರಣ ಕೇಳಿ ನೋಟೀಸನ್ನು ನೋಂದಣಿ ಅಂಚೆ ಮೂಲಕ ನೀಡಲಾಗಿದ್ದು, ಸದರಿ ಕಾರಣ ಕೇಳಿ ನೋಟೀಸಿಗೆ ವಾಹನ ಮಾಲೀಕರು ಅವರ ವಕೀಲರ ಮುಖಾಂತರ ದಿ:3 -2-2009 ರಂದು ಉತ್ತರವನ್ನು ಸಲ್ಲಿಸಿರುತ್ತಾರೆ.

ಅಬಕಾರಿ ನಿರೀಕ್ಷಕರು, ಸುಳ್ಯ ವಲಯ, ಸುಳ್ಯ ಇವರ ತನಿಖಾ ವರದಿ ಸಂಖ್ಯೆ: ಸಿಆರ್‌ಎಂ /ಪ್ರ.ಮಾ.ವ.ಸಂ.163 /2008/ಸಿಆರ್‌ಎಂ/2010-11 ದಿ:6-8-2010 ರ ವರದಿಯಲ್ಲಿ, ತಕ್ಷೀರಿನಲ್ಲಿ ವಶಪಡಿಸಿಕೊಂಡ ಮದ್ಯದ ಸ್ಯಾಂಪಲ್‌ಗಳನ್ನು ಸಹಾಯಕ ಪೊಲೀಸ್ ಅಧೀಕ್ಷಕರು, ಪುತ್ತೂರು ಉಪ ವಿಭಾಗ, ಪುತ್ತೂರು ಇವರು ರಾಸಾಯನಿಕ ವಿಶ್ಲೇಷಣೆಗೆ ಕಳುಹಿಸಲಾಗಿದ್ದು, ಇವರು ಸಲ್ಲಿಸಿದ ರಾಸಾಯನಿಕ ವಿಶ್ಲೇಷಣಾ ವರದಿ ಸಂಖ್ಯೆ:ಇ–367-5 ದಿ:14-8-2008 ರ ವರದಿಯಲ್ಲಿ, ಮದ್ಯದ ಮದ್ಯಸಾರ ಪ್ರಮಾಣ ಶೇ.42 ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ. ತಕ್ಷೀರಿನಲ್ಲಿ ವಶಪಡಿಸಿಕೊಂಡ ಮದ್ಯವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಆದೇಶ ನೀಡಬೇಕೆಂದು ಹಾಗೂ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಿದ ಆಟೋರಿಕ್ಷಾವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಬಹಿರಂಗ ಹರಾಜಿನಲ್ಲಿ ವಿಲೇವಾರಿಗೊಳಿಸಲು ಶಿಫಾರಸ್ಸು ಮಾಡಿರುತ್ತಾರೆ.

ನಂತರ ಪ್ರಕರಣದ ವಿಚಾರಣೆಯನ್ನು ಆರಂಭಿಸಿ, ಈ ಪ್ರಕರಣದಲ್ಲಿ ಈ ಕೆಳಗಿನಂತೆ ವಿವಾದಾಂಶಗಳು ಉದ್ಭವಿಸುತ್ತದೆ.

1) ಮೊದಲನೇ ವಿವಾದಾಂಶ: ದಿ:01-07-2008 ರಂದು ಆಟೋರಿಕ್ಷಾ ಸಂಖ್ಯೆ: ಕೆಎ–21–3628 ರಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿದೆಯೇ? ಮತ್ತು ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ ಮತ್ತು ನಿಯಮಗಳ ರೀತ್ಯಾ ಉಲ್ಲಂಘನೆಗೆ ಬಳಸಲಾಗಿದೆಯೇ?

2) ಎರಡನೇ ವಿವಾದಾಂಶ: ಸದರಿ ವಾಹನದಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿರುವುದರ ಬಗ್ಗೆ ವಾಹನ ಮಾಲೀಕರಿಗೆ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೆ ನಡೆದಿದೆ ಹಾಗೂ ಇದರ ಬಗ್ಗೆ ಅವರು ಸಾಕಷ್ಟು ಮುಂಜಾಗ್ರತ ಕ್ರಮವನ್ನು ಕೈಗೊಳ್ಳಲಾಗಿತ್ತು ಎಂಬ ಅಂಶವನ್ನು ಆರೋಪಿಗಳು ಮತ್ತು ವಾಹನ ಮಾಲೀಕರು ಈ ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲವೇ?

3 ) ಮೂರನೇ ವಿವಾದಾಂಶ: ಜಪ್ತುಪಡಿಸಲಾದ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ಅಥವಾ ಇಲ್ಲವೇ?

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ: 1**

ಪ್ರಾಸಿಕ್ಯೂಶನ್ ಪರ ಪ್ರಕರಣದ ಮಹಜರು ಪಂಚರು ಸಾಕ್ಷಿದಾರರಾದ ಶ್ರೀ.ಯೋಗೀಶ್, ಕಲ್ಲಗದ್ದೆ ಮನೆ, ಐವರ್ನಾಡು, ಸುಳ್ಯ ಇವರು ದಿ:2-9-2009 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಎ.ಡಿ.ಪಿ.ಯವರ ಮುಖ್ಯ ವಿಚಾರಣೆಗೆ ಉತ್ತರವನ್ನು ನೀಡುತ್ತಾ,ತಾನು ದಿ:1-7-2008 ರಂದು ಸುಳ್ಯ ಪೊಲೀಸ್ ಠಾಣೆಯ ಅಧಿಕಾರಿಗಳು ಸದರಿ ಮಹಜರಿಗೆ ಸಹಿ ಹಾಕಲು ತಿಳಿಸಿರುವುದರಿಂದ, ಸದರಿ ಮಹಜರಿನ ಪ್ರತಿಯನ್ನು ನಿಶಾನೆ ಪಿ–1 ಎಂದು, ಅದರಲ್ಲಿರುವ ತನ್ನ ಸಹಿಯನ್ನು ನಿಶಾನೆ ಪಿ–1ಎ ಎಂದು ಗುರುತಿಸಲಾಯಿತು. ಅಂಗಡಿಯ ಮಾಲೀಕ ಶ್ರೀ.ಪುಟ್ಟಣ್ಣ ಗೌಡರವರ ಪರಿಚಯವಿರುತ್ತದೆ ಎಂದು ಸಾಕ್ಷಿ ನುಡಿದಿರುತ್ತಾರೆ.

ಅರ್ಜಿದಾರರ ಪಾಟೀ ಸವಾಲಿಗೆ ಉತ್ತರಿಸುತ್ತಾ, ತನಗೆ ಮದ್ಯ ಹಾಗೂ ವಾಹನದ ಬಗ್ಗೆ ಏನೂ ತಿಳಿದಿರುವುದಿಲ್ಲ ಎಂದು ಸಾಕ್ಷಿ ನುಡಿದಿರುತ್ತಾರೆ.

**ಪ್ರಾ.ಸಾ: 2**

ಶ್ರೀ.ಎಸ್.ರಮೇಶ್, ಐವರ್ನಾಡು ಗ್ರಾಮ, ಸುಳ್ಯ ಇವರು ದಿ:2-9-2009 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಎ.ಡಿ.ಪಿ.ಯವರ ಮುಖ್ಯ ವಿಚಾರಣೆಗೆ ಉತ್ತರವನ್ನು ನೀಡುತ್ತಾ, ತಾನು ದಿ:1-7-2008 ರಂದು ರಾತ್ರಿ ಸುಮಾರು 7-3 0 ಗಂಟೆ ಸಮಯಕ್ಕೆ ಐವರ್ನಾಡು ಗ್ರಾಮದಿಂದ ಸುಳ್ಯ ಕಡೆಗೆ ಬೈಕಿನಲ್ಲಿ ಹೋಗುತ್ತಿರುವ ಸಂದರ್ಭದಲ್ಲಿ ನಾಟಿಕೇರಿ ಎಂಬಲ್ಲಿರುವ ಪುಟ್ಟಣ್ಣ ಗೌಡರವರ ಅಂಗಡಿ ಸಮೀಪ ತನ್ನ ಬೈಕನ್ನು ನಿಲ್ಲಿಸಿ ಮಹಜರಿಗೆ ಸಹಿ ಹಾಕಿರುತ್ತೇನೆ. ಯಾವ ವಿಷಯಕ್ಕೆ ಎಂದು ತನಗೆ ತಿಳಿದಿರುವುದಿಲ್ಲ. ತನ್ನ ಸಹಿಯನ್ನು ನಿಶಾನೆ– ಪಿ1ಬಿ ಎಂದು ಸಾಕ್ಷಿ ನುಡಿದಿರುತ್ತಾರೆ.

ಅರ್ಜಿದಾರರ ಪಾಟೀ ಸವಾಲಿಗೆ ಉತ್ತರಿಸುತ್ತಾ, ವಾಹನ ಮಾಲೀಕರ ಪರಿಚಯವಿರುವುದಿಲ್ಲ. ಪೊಲೀಸರ ಒತ್ತಾಯದ ಮೇರೆಗೆ ತಾನು ಸಹಿ ಹಾಕಿರುತ್ತೇನೆಂದು ಸಾಕ್ಷಿ ನುಡಿದಿರುತ್ತಾರೆ.

**ಪ್ರಾ.ಸಾ: 3**

ಶ್ರೀ.ಸೋಮನಾಥ ರೈ, ಪೊಲೀಸ್ ಆರಕ್ಷಕರು, ಸುಳ್ಯ ಪೊಲೀಸ್ ಠಾಣೆ, ಸುಳ್ಯ ಇವರು ಪ್ರಕರಣದ ಮಹಜರು ಸಾಕ್ಷಿದಾರರಾಗಿ ದಿ:27-10-2009 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಎ.ಡಿ.ಪಿ.ಯವರ ಮುಖ್ಯ ವಿಚಾರಣೆಗೆ ಉತ್ತರವನ್ನು ನೀಡುತ್ತಾ, ತಾನು ದಿ:1-7-2008 ರಂದು ತಮ್ಮ ಠಾಣಾ ಪೊಲೀಸ್ ಉಪ ನಿರೀಕ್ಷಕರು ಮತ್ತು ತಮ್ಮ ಇತರ ಸಿಬ್ಬಂದಿಗಳೊಂದಿಗೆ ಅವರಿಗೆ ದೊರೆತ ಖಚಿತ ವರ್ತಮಾನದ ಮೇರೆಗೆ ಐವರ್ನಾಡು ಗ್ರಾಮದ ನಾಟಿಕೇರಿ ಎಂಬಲ್ಲಿ ತಮ್ಮ ಇಲಾಖಾ ಜೀಪಿನಲ್ಲಿ ಕರೆದುಕೊಂಡು ಹೋಗಿರುತ್ತಾರೆ. ನಾಟಿಕೇರಿ ಬಳಿ ಬಂದಾಗ, ಪುಟ್ಟಣ್ಣ ಗೌಡರ ಅಂಗಡಿಯ ಬಳಿಯಲ್ಲಿ ಆಟೋರಿಕ್ಷಾದಿಂದ ಮದ್ಯ ತುಂಬಿದ ರಟ್ಟಿನ ಪೆಟ್ಟಿಗೆಗಳನ್ನು ತೆಗೆದುಕೊಂಡು ಅಂಗಡಿಯ ಒಳಗೆ ದಾಸ್ತಾನು ಇಟ್ಟಿರುವುದು, ಆಗ ಸಮಯ ರಾತ್ರಿ 8-15 ಆಗಿದ್ದು, ನಂತರ ರಿಕ್ಷಾ ಚಾಲಕನಲ್ಲಿ ವಿಚಾರಿಸಿದಾಗ, ಮದ್ಯ ತುಂಬಿದ ರಟ್ಟಿನ ಪೆಟ್ಟಿಗೆಗಳನ್ನು ಮಾರಾಟಕ್ಕಾಗಿ ತಂದಿರುವುದಾಗಿ ತಿಳಿಸಿರುತ್ತಾರೆ. ಮದ್ಯವನ್ನು ಹೊಂದಲು ಮತ್ತು ಮಾರಾಟ ಮಾಡಲು ಅವರಲ್ಲಿ ಯಾವುದೇ ಪರವಾನಿಗೆ ಇರಲಿಲ್ಲ. ಸದರಿ ಆಟೋರಿಕ್ಷಾದ ನೋಂದಣಿ ಸಂ: ಕೆಎ–21–3628 ಆಗಿದ್ದು, ಸದರಿ ರಟ್ಟಿನ ಪೆಟ್ಟಿಗೆಗಳಲ್ಲಿ ಪ್ರತಿಯೊಂದು ಪೆಟ್ಟಿಗೆಯಲ್ಲಿ 180 ಎಂ.ಎಲ್.ನ 48 ಬಾಟಲ್‌ಗಳಂತೆ ಒಟ್ಟು 5 ರಟ್ಟಿನ ಪೆಟ್ಟಿಗೆಗಳಿದ್ದು, ಒಟ್ಟು 43 -200 ಲೀಟರ್ ಮದ್ಯ ಪತ್ತೆಯಾದವು. ಪ್ರತಿ ರಟ್ಟಿನ ಪೆಟ್ಟಿಗೆಯಿಂದ ರಾಸಾಯನಿಕ ಪರೀಕ್ಷೆಗಾಗಿ ತಲಾ ಒಂದರಂತೆ ಒಟ್ಟು 5 ಮದ್ಯದ ಬಾಟಲ್‌ಗಳನ್ನು ಮಾದರಿಗಾಗಿ ತೆಗೆದಿರಿಸಲಾಯಿತು. ಈ ಸಂದರ್ಭದಲ್ಲಿ ಪಂಚರನ್ನು ಕರೆಯಿಸಿ ಪಂಚರ ಸಮಕ್ಷಮ ಮದ್ಯ ತುಂಬಿದ ರಟ್ಟಿನ ಪೆಟ್ಟಿಗೆಗಳನ್ನು ಮದ್ಯದ ಬಾಟಲ್ ಸಮೇತ ಆಟೋರಿಕ್ಷಾವನ್ನು ಜಪ್ತುಪಡಿಸಲಾಯಿತು. ಸ್ಥಳದಲ್ಲಿಯೇ ಮಹಜರನ್ನು ತಯಾರಿಸಿದೆವು. ಮಹಜರಿಗೆ ತಾನು ಸಹಿ ಮಾಡಿರುತ್ತೇನೆ. ಸದರಿ ಮಹಜರಿನಲ್ಲಿರುವ ತನ್ನ ಸಹಿಯನ್ನು ನಿಶಾನೆ ಪಿ–1ಸಿ ಎಂದು ಗುರುತಿಸಲಾಯಿತು ಮತ್ತು ಆಟೋರಿಕ್ಷಾವನ್ನು ಅಕ್ರಮ ಮದ್ಯಕ್ಕೆ ಉಪಯೋಗಿಸಿದ ಕಾರಣ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವಂತೆ ಸಾಕ್ಷಿ ನುಡಿದಿರುತ್ತಾರೆ.

ಅರ್ಜಿದಾರರ ಪಾಟೀ ಸವಾಲಿಗೆ ಉತ್ತರಿಸುತ್ತಾ, ಸದರಿ ಆಟೋರಿಕ್ಷಾದ ಬಳಿ ಇಬ್ಬರು ಆರೋಪಿಗಳನ್ನು ಮಾತ್ರ ಕಂಡಿದ್ದು, ಬೇರೆ ಯಾರೂ ಇರುವುದಿಲ್ಲ. ದೀನಸಿ ಅಂಗಡಿಯ ಸುತ್ತಮುತ್ತ 10 ಮೀಟರ್ ಅಂತರದಲ್ಲಿ ಯಾವುದೇ ಅಂಗಡಿಗಳು ಇರುವುದಿಲ್ಲ. ಅಂಗಡಿಯ ಮಾಲೀಕ ಪುಟ್ಟಣ್ಣ ಗೌಡರವರು ಎರಡು ಕಾಲು ಕಳೆದುಕೊಂಡಿರುವ ಅಂಗವಿಕಲರಾಗಿದ್ದು, ಅವರು ಓಡಲು ಪ್ರಯತ್ನಿಸಿರುವುದಿಲ್ಲ. ರಿಕ್ಷಾ ಚಾಲಕರ ಹಿಂದಿನ ಸೀಟಿನಲ್ಲಿ ಪ್ರಯಾಣಿಕರು ಕುಳಿತುಕೊಳ್ಳುವ ಸೀಟಿನ ಮುಂಭಾಗದಿಂದ ಸದರಿ ಜಪ್ತುಪಡಿಸಿದ ಮದ್ಯಗಳನ್ನು ತಂದು ಅಂಗಡಿಯಲ್ಲಿಡಲಾಗಿತ್ತು. ತಾನು ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆಂದರೆ ಸರಿಯಲ್ಲ ಎಂದು ಸಾಕ್ಷಿ ನುಡಿದಿರುತ್ತಾರೆ.

**ಪ್ರಾ.ಸಾ: 4**

ಶ್ರೀಮತಿ.ಗೀತಾ.ಪಿ, ಅಬಕಾರಿ ನಿರೀಕ್ಷಕರು, ಭಟ್ಕಳ ವಲಯ, ಉತ್ತರ ಕನ್ನಡ ಇವರು ಪ್ರಕರಣದ ತನಿಖಾಧಿಕಾರಿಯಾಗಿದ್ದು, ದಿ:15-12-2009 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಎ.ಡಿ.ಪಿ.ಯವರ ಮುಖ್ಯ ವಿಚಾರಣೆಗೆ ಉತ್ತರವನ್ನು ನೀಡುತ್ತಾ, ತಾನು ತಕ್ಷೀರು ಸಂ:163 /2008 ಕ್ಕೆ ಸಂಬಂಧಿಸಿದ ಸೊತ್ತುಗಳನ್ನು ಈ ಪ್ರಾಧಿಕಾರದ ಆದೇಶದಂತೆ ದಿ:4-10-2008 ರಂದು ಪಡೆದುಕೊಂಡಿರುತ್ತೇನೆ. ಆಟೋರಿಕ್ಷಾ ಸಂಖ್ಯೆ: ಕೆಎ–21–3628 ರ ನೋಂದಣಿ ಮಾಲಿಕತ್ವದ ಬಗ್ಗೆ ಆರ್.ಟಿ.ಓ., ಪುತ್ತೂರು ಇವರಿಗೆ ಬಿ ಎಕ್ಸ್‌ಟ್ರ್ಯಾಕ್ಟ್ ವರದಿಯನ್ನು ಕೋರಿ ಪತ್ರ ಬರೆದಿರುತ್ತೇನೆ. ಆರ್.ಟಿ.ಓ., ಪುತ್ತೂರು ಇವರು ಆನಂದ ಗೌಡ, ಸುಳ್ಯ ಇವರೇ ವಾಹನದ ಮಾಲೀಕರೆಂದು ಬಿ ವಹಿಯಲ್ಲಿ ನೀಡಿರುತ್ತಾರೆ. ಈ ಪ್ರಾಧಿಕಾರದ ಮಧ್ಯಂತರ ಆದೇಶದಂತೆ ವಾಹನವನ್ನು ಅರ್ಜಿದಾರರ ವಶಕ್ಕೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಿರುತ್ತೇನೆ. ತಾನು ಸ್ವೀಕರಿಸಿದ ಬಿ ಎಕ್ಸ್‌ಟ್ರ್ಯಾಕ್ಟ್ ವರದಿಯನ್ನು ನಿಶಾನೆ ಪಿ–2 ಎಂದು, ರಾಸಾಯನಿಕ ವಿಶ್ಲೇಷಕರ ವರದಿಯನ್ನು ನಿಶಾನೆ ಪಿ–3 ಎಂದು ಮತ್ತು ತನಿಖಾ ವರದಿಯನ್ನು ನಿಶಾನೆ ಪಿ–4 ಎಂದು ಅದರಲ್ಲಿರುವ ತನ್ನ ಸಹಿಯನ್ನು ನಿಶಾನೆ ಪಿ–4ಎ ಎಂದು ಗುರುತಿಸಲಾಯಿತು. ಆಟೋರಿಕ್ಷಾವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬೇಕೆಂದು ಈ ಪ್ರಾಧಿಕಾರದ ಮುಂದೆ ಸಾಕ್ಷಿ ನುಡಿದಿರುತ್ತಾರೆ.

**ಪ್ರಾ.ಸಾ: 5**

ಶ್ರೀ.ಚಿಕ್ಕಪ್ಪ ರೈ.ಕೆ, ಪೊಲೀಸ್ ಮುಖ್ಯ ಆರಕ್ಷಕರು, ಸುಳ್ಯ ಪೊಲೀಸ್ ಠಾಣೆ, ಸುಳ್ಯ ಇವರು ಪ್ರಕರಣದ ಮಹಜರು ಸಾಕ್ಷಿದಾರರಾಗಿ ದಿ:27-4-2010 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಎ.ಡಿ.ಪಿ.ಯವರ ಮುಖ್ಯ ವಿಚಾರಣೆಗೆ ಉತ್ತರವನ್ನು ನೀಡುತ್ತಾ, ತಾನು ದಿ:1-7-2008 ರಂದು ಐವರ್ನಾಡು ಗ್ರಾಮದ ನಾಟಿಕೇರಿ ಪುಟ್ಟಣ್ಣ ಗೌಡರವರ ಅಂಗಡಿಯಲ್ಲಿ ಅಕ್ರಮವಾಗಿ ಮದ್ಯ ಸಾಗಾಟ ಮಾಡುತ್ತಿರುವವರ ಬಗ್ಗೆ ತಮ್ಮ ಪೊಲೀಸ್ ಉಪ ನಿರೀಕ್ಷಕರಿಗೆ ದೊರೆತ ಖಚಿತ ವರ್ತಮಾನದ ಮೇರೆಗೆ ತನ್ನ ಸಿಬ್ಬಂದಿಯವರೊಂದಿಗೆ ಕೂಡಿಕೊಂಡು ಸದರಿ ಸ್ಥಳಕ್ಕೆ ದಾಳಿ ನಡೆಸಿದಾಗ, ಅಂಗಡಿಯ ಎದುರುಗಡೆ ಕೆಎ–21–3 628 ಸಂಖ್ಯೆಯ ಆಟೋರಿಕ್ಷಾ ನಿಂತಿದ್ದು, ಆಟೋರಿಕ್ಷಾದಿಂದ ರಟ್ಟಿನ ಪೆಟ್ಟಿಗೆಯನ್ನು ತೆಗೆದು ಪುಟ್ಟಣ್ಣ ಗೌಡರವರ ಅಂಗಡಿಯೊಳಗೆ ಇಡುತ್ತಿರುವುದು ಕಂಡು ಬಂದಿದ್ದು, ರಾತ್ರಿ 8-15 ಗಂಟೆಗೆ ತಾವು ದಾಳಿ ಮಾಡಲಾಗಿದ್ದು, ಸದರಿ ರಟ್ಟಿನ ಪೆಟ್ಟಿಗೆಯಲ್ಲಿದ್ದ ಮದ್ಯವನ್ನು ಮಾರಾಟ ಮಾಡಲೆಂದು ತಂದಿರುವುದಾಗಿ ಹಾಗೂ ಮದ್ಯದ ಬಗ್ಗೆ ಯಾವುದೇ ಪರವಾನಿಗೆ ಇಲ್ಲವೆಂದು ಪುಟ್ಟಣ್ಣ ಗೌಡರವರು ತಿಳಿಸಿರುತ್ತಾರೆ. ಪುಟ್ಟಣ್ಣ ಗೌಡ ಇವರು ಅಂಗಡಿಯ ಮಾಲೀಕರಾಗಿದ್ದು.

ರಿಕ್ಷಾ ಚಾಲಕನ ಹೆಸರು ಆನಂದ ಎಂದು ತಿಳಿಸಿದ ಮೇರೆಗೆ, ಸದರಿ ರಟ್ಟಿನ ಪೆಟ್ಟಿಗೆಯನ್ನು ಪರಿಶೀಲಿಸಿದಾಗ, 180 ಎಂ.ಎಲ್.ನ 48 ಬಾಟಲ್‌ಗಳಿರುವ ಒಟ್ಟು 5 ರಟ್ಟಿನ ಪೆಟ್ಟಿಗೆಗಳಿದ್ದು, ಅದರಲ್ಲಿರುವ 4 ರಟ್ಟಿನ ಪೆಟ್ಟಿಗೆಗಳು ಮ್ಯಾಜಿಕ್ ಬ್ಲೆಂಡೆಡ್ ಫೈನ್ ವಿಸ್ಕಿ ಮತ್ತು ಒಂದು ರಟ್ಟಿನ ಪೆಟ್ಟಿಗೆಯಲ್ಲಿ ಒರಿಜಿನಲ್ ಚಾಯ್ಸ್ ವಿಸ್ಕಿ ಎಂದು ಬರೆದಿರುವ ಲೇಬಲ್‌ಗಳನ್ನು ಅಂಟಿಸಿರುತ್ತಾರೆ. ಸದರಿ ಮದ್ಯದಿಂದ ರಾಸಾಯನಿಕ ಪರೀಕ್ಷೆಗಾಗಿ ಪ್ರತಿಯೊಂದು ರಟ್ಟಿನ ಪೆಟ್ಟಿಗೆಯಿಂದ ತಲಾ ಒಂದರಂತೆ 180 ಎಂ.ಎಲ್.ನ ಮದ್ಯ ತುಂಬಿದ ಬಾಟಲ್‌ನ್ನು ಮಾದರಿಯಾಗಿ ತೆಗೆದು,ಅದಕ್ಕೆ ಬಿಳಿ ಬಟ್ಟೆಯಿಂದ ಸುತ್ತಿ ಎಸ್.ಹೆಚ್.ಒ. ಅರಗು ಸೀಲ್ ಹಾಕಿ, ಮದ್ಯ ಹಾಗೂ ಆಟೋರಿಕ್ಷಾವನ್ನು ವಶಪಡಿಸಿಕೊಂಡು ಮಹಜರನ್ನು ಸ್ಥಳದಲ್ಲಿಯೇ ಬರೆದು, ಮಹಜರಿಗೆ ಸಹಿ ಮಾಡಿರುತ್ತೇನೆ. ತನ್ನ ಸಹಿಯನ್ನು ನಿಶಾನೆ ಪಿ–1ಡಿ ಎಂದು ಗುರುತಿಸಲಾಯಿತು. ಆಟೋರಿಕ್ಷಾವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬೇಕೆಂದು ಈ ಪ್ರಾಧಿಕಾರದ ಮುಂದೆ ಸಾಕ್ಷಿ ನುಡಿದಿರುತ್ತಾರೆ.

ಅರ್ಜಿದಾರರ ಪಾಟೀ ಸವಾಲಿಗೆ ಉತ್ತರಿಸುತ್ತಾ, ತಾನು ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆಂದರೆ ಸರಿಯಲ್ಲ ಎಂದು ಸಾಕ್ಷಿ ನುಡಿದಿರುತ್ತಾರೆ.

ಪ್ರಕರಣದ ಪಿಡಬ್ಲ್ಯೂ–1, ಪಿಡಬ್ಲ್ಯೂ–2, ಪಿಡಬ್ಲ್ಯೂ–3 , ಪಿಡಬ್ಲ್ಯೂ–4 ಮತ್ತು ಪಿಡಬ್ಲ್ಯೂ–5 ರ ಸಾಕ್ಷಿ ವಿಚಾರಣೆಯಲ್ಲಿ, ಅರ್ಜಿದಾರರ ಪಾಟೀ ಸವಾಲಿನ ಉತ್ತರಕ್ಕೆ ಅನುಗುಣವಾಗಿ ವಿಚಾರಣೆಯಲ್ಲಿ ಯಾವುದೇ ಪ್ರಯೋಜನವಾಗಿರುವುದಿಲ್ಲ. ಪ್ರಕರಣದ ಮಹಜರು ಸಾಕ್ಷಿದಾರರು, ತನಿಖಾಧಿಕಾರಿಯವರು ಮತ್ತು ಪಂಚರು ಇವರು ಪೂರಕವಾಗಿ ನೀಡಿರುವ ಸಾಕ್ಷ್ಯಾಧಾರದ ಮೇಲೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ದಿ:1-7-2008 ರಂದು ಜಪ್ತುಪಡಿಸಿಕೊಂಡಿರುವ ಆಟೋರಿಕ್ಷಾ ಸಂಖ್ಯೆ:ಕೆಎ–21-3628 ರ ಆರ್.ಸಿ. ಮಾಲೀಕರಾದ ಆನಂದ ಗೌಡರು ಸದರಿ ವಾಹನದ ಚಾಲಕನಾಗಿ ದಸ್ತಗಿರಿಯಾಗಿರುವುದರಿಂದ, ಸದರಿ ಆಟೋರಿಕ್ಷಾದಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರ ಹಾಗೂ ಬಿಲ್ಲುಗಳನ್ನು ಹೊಂದದೆ 43 -200 ಲೀಟರ್ ಮದ್ಯವನ್ನು ಸಾಗಾಣಿಕೆ ಮಾಡಿರುವುದು ಸಾಬೀತಾಗಿರುತ್ತದೆ. ಆದುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

**ಡಿಡಬ್ಲ್ಯೂ–1:**

ಶ್ರೀ.ಆನಂದ ಗೌಡ, ಕಾಯರ್ ತೋಡ್ ಮನೆ, ಗಾಂಧಿನಗರ, ಸುಳ್ಯ ತಾಲೂಕು ಇವರು ದಿ:13 -7-2010 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನೀಡಿದ್ದು, ತಾನು ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನದ ಮಾಲೀಕನಾಗಿದ್ದು, ತಾನು ದಿ:1-7-2008 ರಂದು ತನ್ನ ವಾಹನವನ್ನು ಸುಳ್ಯ ಬಸ್‌ಸ್ಟ್ಯಾಂಡ್‌ನಲ್ಲಿದ್ದ ರಿಕ್ಷಾ ಪಾರ್ಕಿನಿಂದ ಮಧ್ಯಾಹ್ನ 2-00 ಗಂಟೆಯ ಹೊತ್ತಿಗೆ ಸುಳ್ಯ ಪೊಲೀಸರು ಬಂದು ತೆಗೆದುಕೊಂಡು ಹೋಗಿರುತ್ತಾರೆ. ನಂತರ ತನ್ನನ್ನು ಸುಳ್ಯ ಪೊಲೀಸ್ ಠಾಣೆಗೆ ಸಂಪರ್ಕಿಸಲು ತಿಳಿಸಿರುತ್ತಾರೆ. ತನ್ನ ರಿಕ್ಷಾವನ್ನು ಈ ಹಿಂದೆ 2-3 ಸಲ ತಮ್ಮ ಸ್ವಂತ ಉಪಯೋಗಕ್ಕಾಗಿ ಸುಳ್ಯ ಪೊಲೀಸ್ ಠಾಣೆಗೆ ತರಲು ತಿಳಿಸಿದ್ದು, ತಾನು ಅದಕ್ಕೆ ಒಪ್ಪದ ಕಾರಣ ತನ್ನ ವಾಹನವನ್ನು ಪೊಲೀಸ್ ಠಾಣೆಗೆ ತೆಗೆದುಕೊಂಡು ಹೋಗಿರುತ್ತಾರೆ. ತನ್ನ ಮೇಲೆ ಸುಳ್ಳು ಮೊಕದ್ದಮೆಯನ್ನು ದಾಖಲಿಸಿ, ತಾನು ಯಾವುದೇ ಮದ್ಯವನ್ನು ಸಾಗಾಟ ಮಾಡಿಲ್ಲ. ತನ್ನ ರಿಕ್ಷಾವನ್ನು ತನಗೆ ಬಿಡುಗಡೆಗೊಳಿಸಬೇಕೆಂದು ಸಾಕ್ಷಿ ನುಡಿದಿರುತ್ತಾರೆ.

ಎ.ಡಿ.ಪಿ.ಯವರ ಪಾಟೀ ಸವಾಲಿಗೆ ಉತ್ತರಿಸುತ್ತಾ, ತಾನು ತನ್ನ ರಿಕ್ಷಾದಲ್ಲಿ 20 ವರ್ಷಗಳಿಂದ ದುಡಿಯುತ್ತಿದ್ದು, ತನ್ನ ರಿಕ್ಷಾವನ್ನು ಪೊಲೀಸರು ಸ್ವಂತ ಉಪಯೋಗಕ್ಕೆ ಕೇಳಲಿಲ್ಲ ಎಂದರೆ ಸರಿಯಲ್ಲ. ತನ್ನ ಮೇಲೆ ಯಾವುದೇ ಪೊಲೀಸರಿಗೆ ದ್ವೇಷ ಇರುವುದಿಲ್ಲ. ತನ್ನ ವಿರುದ್ದ ಸುಳ್ಳು ಮೊಕದ್ದಮೆ ದಾಖಲಿಸಿ, ತಾನು ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆಂದರೆ ಸರಿಯಲ್ಲ ಎಂದು ಸಾಕ್ಷಿ ನುಡಿದಿರುತ್ತಾರೆ.

ತಕ್ಷೀರಿನಲ್ಲಿ ವಾಹನದ ಮಾಲೀಕರಾದ ಶ್ರೀ.ಆನಂದ ಗೌಡರವರ ಹೇಳಿಕೆಗಳು ಒಂದಕ್ಕೊಂದು ಪೂರಕವಾಗಿ ಸಾಕ್ಷಿ ನೀಡಿರುವುದಿಲ್ಲ. ವಾಹನದ ಮಾಲೀಕರು ನೀಡಿರುವ ಸಾಕ್ಷಿ ಹೇಳಿಕೆಯಲ್ಲಿ,ಪೊಲೀಸರು ತನ್ನ ಆಟೋರಿಕ್ಷಾವನ್ನು ಸ್ವಂತ ಉಪಯೋಗಕ್ಕಾಗಿ ಉಪಯೋಗಿಸಲು ಕೇಳಿರುವ ಕಾರಣಕ್ಕಾಗಿ ತನ್ನ ವಿರುದ್ದ ಸುಳ್ಳು ಮೊಕದ್ದಮೆ ದಾಖಲಿಸಿ ಆಟೋರಿಕ್ಷಾವನ್ನು ವಶಪಡಿಸಿಕೊಂಡಿರುತ್ತಾರೆ ಎಂದು ಸಾಕ್ಷಿ ನುಡಿದಿರುತ್ತಾರೆ. ಆದರೆ ಪೊಲೀಸ್ ಠಾಣೆಯ ಯಾವ ಪೊಲೀಸರು ನಿರ್ದಿಷ್ಟವಾಗಿ ತನ್ನ ವಾಹನವನ್ನು ಸ್ವಂತ ಉಪಯೋಗಕ್ಕಾಗಿ ಕೇಳಿರುವ ಬಗ್ಗೆ ಮೇಲಾಧಿಕಾರಿಗಳಿಗೂ ಹಾಗೂ ಪೊಲೀಸ್ ಠಾಣೆಯಲ್ಲಿ ಯಾವುದೇ ದೂರು ಸ್ವೀಕೃತವಾಗಿರುವುದಿಲ್ಲ ಹಾಗೂ ಮಾಲೀಕನೇ ಚಾಲಕನಾಗಿರುವುದರಿಂದ, ತನ್ನ ಮೇಲೆ ಬೇರೆ ಯಾರೋ ವೈರತ್ವದಿಂದ ಈ ಕೃತ್ಯ ಎಸಗಿರುತ್ತಾರೆಂದು ಸಾಬೀತುಪಡಿಸಲು ಯಾವುದೇ ಹೇಳಿಕೆಗಳನ್ನು ಹಾಗೂ ದಾಖಲಾತಿಗಳನ್ನು ಹಾಜರುಪಡಿಸಿರುವುದಿಲ್ಲ. ಪೊಲೀಸ್ ಉಪ ನಿರೀಕ್ಷಕರು, ಸುಳ್ಯ ಪೊಲೀಸ್ ಠಾಣೆ, ಸುಳ್ಯ ಇವರು ದಿ:1-7-2008 ರಂದು ತಯಾರಿಸಿದ ಮಹಜರಿನಲ್ಲಿ ನಮೂದಿಸಿದಂತೆ, ಆರೋಪಿಯಾದ ಆನಂದ ಗೌಡ ಇವರು ಆಟೋರಿಕ್ಷಾದ ಚಾಲಕರಾಗಿದ್ದು, ತನಿಖಾಧಿಕಾರಿಗಳು ಸಲ್ಲಿಸಿದ ಬಿ ಎಕ್ಸ್‌ಟ್ರ್ಯಾಕ್ಟ್ ವರದಿಯ ಪ್ರಕಾರ ವಾಹನದ ಮಾಲೀಕ ಆನಂದ ಗೌಡರಾಗಿದ್ದು, ಇವರು ಹೆಚ್ಚಿನ ಹಣ ಸಂಪಾದಿಸುವ ಸಲುವಾಗಿ ತನ್ನ ಆಟೋರಿಕ್ಷಾದಲ್ಲಿ 43-200 ಲೀಟರ್ ಮದ್ಯವನ್ನು ತಂದು ಅಂಗಡಿಯ ಮಾಲೀಕನಾದ ಕೆ.ಪುಟ್ಟಣ್ಣ ಗೌಡ ಇವರಿಗೆ ಮಾರಾಟ ಮಾಡಲೆಂದು ತಂದಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಸದರಿ ಸಮಯದಲ್ಲಿ ಸದರಿ ಮದ್ಯದ ಬಗ್ಗೆ ಯಾವುದೇ ಪರವಾನಿಗೆ ಅಥವಾ ಬಿಲ್ಲುಗಳನ್ನು ಹಾಜರುಪಡಿಸಿರುವುದಿಲ್ಲ. ಆದುದರಿಂದ ಇದು ಅಕ್ರಮ ಮದ್ಯ ಸಾಗಾಟ ಮತ್ತು ಮಾರಾಟವಾಗಿರುವುದು ಹಾಗೂ ರಾಸಾಯನಿಕ ವಿಶ್ಲೇಷಕರು, ಮಂಗಳೂರು ಇವರ ಪತ್ರ ಸಂಖ್ಯೆ: ಇ–367-5 ದಿ:14-8-2008 ರ ವರದಿಯಲ್ಲಿ ಮದ್ಯದ ಮದ್ಯಸಾರ ಪ್ರಮಾಣ ಶೇ.42 ಇದ್ದು, ಇದು ಅಕ್ರಮ ಮದ್ಯವೆಂದು ದೃಢಪಟ್ಟಿರುತ್ತದೆ. ಆದುದರಿಂದ ದಿ:1-7-2008 ರಂದು ಆಟೋರಿಕ್ಷಾ ಸಂಖ್ಯೆ:ಕೆಎ–21–3628 ನ್ನು ಯಾವುದೇ ರಹದಾರಿ ಪತ್ರವಿಲ್ಲದೆ ಅಕ್ರಮವಾಗಿ ಮದ್ಯ ಸಾಗಾಣಿಕೆಗೆ ಬಳಸಿರುವುದು ನಿಸ್ಸಂದೇಹವಾಗಿ ಸಾಬೀತಾಗಿರುತ್ತದೆ. ಈ ಮೇಲಿನ ಕಾರಣಗಳಿಂದ ಎರಡನೇ ಅಂಶವನ್ನು ನಕಾರಾತ್ಮಕವಾಗಿ ಪರಿಗಣಿಸಿದೆ.

ಮೇಲಿನ ಎಲ್ಲಾ ಕಾರಣಗಳಿಂದ ಫಿರ್ಯಾದುದಾರರು ಹಾಗೂ ತನಿಖಾಧಿಕಾರಿಗಳ ಮತ್ತು ಮಹಜರು ಸಾಕ್ಷಿಗಳ ವಿಚಾರಣೆ ಹಾಗೂ ರಾಸಾಯನಿಕ ವಿಶ್ಲೇಷಕರ ವರದಿ ಮತ್ತು ಲಭ್ಯವಿರುವ ಸಾಕ್ಷಿ ದಾಖಲಾತಿಗಳಿಂದ, ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ಆಟೋರಿಕ್ಷಾ ಸಂಖ್ಯೆ:ಕೆಎ–21–3628 ನ್ನು ಅಕ್ರಮವಾಗಿ 43-200 ಲೀಟರ್ ಮದ್ಯವನ್ನು ಸಾಗಾಟ ಮಾಡಲು ಬಳಸಲಾಗಿರುವುದು ವಿಚಾರಣೆಯಲ್ಲಿ ಸಾಬೀತಾಗಿರುವುದರಿಂದ, ವಾಹನವನ್ನು ಮತ್ತು ಮದ್ಯವನ್ನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43 ಎ ರಡಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುವುದರಿಂದ, ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ಆಟೋರಿಕ್ಷಾ ಸಂಖ್ಯೆ: ಕೆಎ–21–3628 ನ್ನು ಮತ್ತು 43-200 ಲೀಟರ್ (ಮಾದರಿಗಳನ್ನು ಹೊರತುಪಡಿಸಿ) ಮದ್ಯವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ/70/ಡಿಟಿಸಿಆರ್/2008-09 ದಿ: 10-08-2010**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಾಲಂ 43 (ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, ನಿಯಮ 43 (ಬಿ) ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಪೊಲೀಸ್ ಉಪ ನಿರೀಕ್ಷಕರು, ಸುಳ್ಯ ಪೊಲೀಸ್ ಠಾಣೆ, ಸುಳ್ಯ ಇವರ ತಕ್ರೀರು ಸಂಖ್ಯೆ: 163 /2008 ದಿನಾಂಕ:1-7-2008 ರಲ್ಲಿ ಜಪ್ತುಪಡಿಸಿರುವ ಆಟೋರಿಕ್ಷಾ ಸಂಖ್ಯೆ:ಕೆಎ–21–3628 ನ್ನು ಮತ್ತು 43-200 ಲೀಟರ್ ಮದ್ಯದಲ್ಲಿ ರಾಸಾಯನಿಕ ವಿಶ್ಲೇಷಣೆಗೆ ತೆಗೆದ ಮದ್ಯವನ್ನು ಹೊರತುಪಡಿಸಿ, ಉಳಿದ 42-3 00 ಲೀಟರ್ ಮದ್ಯವನ್ನು ನಿಯಮ 43 ಎ(2) ರನ್ವಯ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಪ್ರಾಧಿಕಾರದಿಂದ ದಿ:4-11-2008 ರಂದು ವಾಹನವನ್ನು ತಾತ್ಕಾಲಿಕವಾಗಿ ಮಧ್ಯಂತರ ಬಿಡುಗಡೆಗೊಳಿಸಿ ಹೊರಡಿಸಿರುವ ಆದೇಶವನ್ನು ರದ್ದುಗೊಳಿಸಿ ಆದೇಶಿಸಿದೆ. ಆರ್.ಸಿ. ಮಾಲೀಕರು ಸದರಿ ಮಧ್ಯಂತರ ಬಿಡುಗಡೆ ಹೊಂದಿರುವ ಆಟೋರಿಕ್ಷಾ ಸಂಖ್ಯೆ:ಕೆಎ–21–3 628 ನ್ನು ಈ ಆದೇಶದ 30 ದಿನಗಳ ಒಳಗೆ ಈ ಪ್ರಾಧಿಕಾರದ ವಶಕ್ಕೆ ಅಬಕಾರಿ ನಿರೀಕ್ಷಕರು, ಸುಳ್ಯ ವಲಯ ಇವರಲ್ಲಿ ಒಪ್ಪಿಸಲು ಆದೇಶಿಸಿದೆ. ತಪ್ಪಿದಲ್ಲಿ ಭದ್ರತೆಯಾಗಿ ಇಟ್ಟಿರುವ ಬ್ಯಾಂಕ್ ಗ್ಯಾರಂಟಿ ಮೊತ್ತ ರೂ.18,500/–ನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿ, ಸದ್ರಿ ಬ್ಯಾಂಕ್ ಗ್ಯಾರಂಟಿಯ ಮೊತ್ತವನ್ನು ಸರಕಾರಕ್ಕೆ ಪಡೆಯಲು ಆದೇಶಿಸಿದೆ ಹಾಗೂ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ ಮದ್ಯವನ್ನು ಸರಕಾರದ ಅಧಿಸೂಚನೆ ಸಂಖ್ಯೆ: ಎಫ್‌ಡಿ/06/ಪಿಐಎಸ್/2007 ದಿ:13-7-2007 ರಂತೆ ಮಾರಾಟ ಮಾಡುವುದನ್ನು ನಿಷೇಧಿಸಿದ್ದು, ಮುಟ್ಟುಗೋಲು ಹಾಕಿಕೊಳ್ಳಲಾದ ಮದ್ಯವನ್ನು ಸದರಿ ಅಧಿಸೂಚನೆಯನ್ನು ಅನುಸರಿಸಿ ಕಲಂ 43 (ಎ)(3 ) ರನ್ವಯ ಅಬಕಾರಿ ನಿರೀಕ್ಷಕರು, ಸುಳ್ಯ ವಲಯ ಇವರ ಸಮಕ್ಷಮ ಅಬಕಾರಿ ಆಯುಕ್ತರು, ಕರ್ನಾಟಕ ರಾಜ್ಯ, ಬೆಂಗಳೂರು ಇವರ ಸುತ್ತೋಲೆ ಸಂಖ್ಯೆ: ಇಸಿಸಿ/73 /ಸಿಆರ್‌ಎಂ/2004 ದಿ:12-9-2005 ರ ಮಾರ್ಗಸೂಚಿಗಳನ್ನು ಅನುಸರಿಸಿ ಮಹಜರು ಜರುಗಿಸಿ ನಾಶಪಡಿಸಲು ಆದೇಶಿಸಿದೆ.

ಈ ಆದೇಶದ ಪಾಲನೆ ಬಗ್ಗೆ ಹಾಗೂ ಸದ್ರಿ ಮುಟ್ಟುಗೋಲು ಹಾಕಿಕೊಳ್ಳಲಾದ ವಾಹನವನ್ನು ಅಬಕಾರಿ ನಿರೀಕ್ಷಕರು, ಸುಳ್ಯ ವಲಯ, ಸುಳ್ಯ ಇವರು ಪಡೆದುಕೊಂಡು ಈ ಪ್ರಾಧಿಕಾರಕ್ಕೆ ವರದಿ ಒಪ್ಪಿಸಲು ಆದೇಶಿಸಿದೆ.

ಈ ಆದೇಶವನ್ನು ದಿ:10-08-2010 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ನೂರ್ ಮಹಮ್ಮದ್ ಹುಸೇನ್**

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ**

ಪ್ರಾ.ಸಾ: 1- ಶ್ರೀ.ಯೋಗೀಶ್, ಕಲ್ಲಗದ್ದೆ ಮನೆ, ಐವರ್ನಾಡು, ಸುಳ್ಯ.
ಪ್ರಾ.ಸಾ: 2 - ಶ್ರೀ.ಎಸ್.ರಮೇಶ್, ಐವರ್ನಾಡು ಗ್ರಾಮ, ಸುಳ್ಯ.
ಪ್ರಾ.ಸಾ: 3 - ಶ್ರೀ.ಸೋಮನಾಥ ರೈ, ಪೊಲೀಸ್ ಆರಕ್ಷಕರು,ಸುಳ್ಯ ಪೊಲೀಸ್ ಠಾಣೆ, ಸುಳ್ಯ
ಪ್ರಾ.ಸಾ: 4 - ಶ್ರೀಮತಿ.ಗೀತಾ.ಪಿ, ಅಬಕಾರಿ ನಿರೀಕ್ಷಕರು, ಭಟ್ಕಳ ವಲಯ, ಉತ್ತರ ಕನ್ನಡ
ಪ್ರಾ.ಸಾ: 5 -ಶ್ರೀ.ಚಿಕ್ಕಪ್ಪ ರೈ.ಕೆ,ಪೊಲೀಸ್ ಮುಖ್ಯ ಆರಕ್ಷಕರು,ಸುಳ್ಯ ಪೊಲೀಸ್ ಠಾಣೆ,ಸುಳ್ಯ

**ಅನುಬಂಧ–2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲಾತಿಗಳು**

ನಿಶಾನೆ ಪಿ–1 : ಮಹಜರ್ ಪ್ರತಿ
ನಿಶಾನೆ ಪಿ–1ಎ : ಮಹಜರ್‌ನಲ್ಲಿ ಫಿರ್ಯಾದುದಾರರ ಸಹಿ
ನಿಶಾನೆ ಪಿ–1ಬಿ : ಮಹಜರ್‌ನಲ್ಲಿ ಪ್ರಾ.ಸಾ.2ರವರ ಸಹಿ.
ನಿಶಾನೆ ಪಿ–1ಸಿ : ಮಹಜರ್‌ನಲ್ಲಿ ಪ್ರಾ.ಸಾ.3 ರವರ ಸಹಿ.
ನಿಶಾನೆ ಪಿ–1ಡಿ : ಮಹಜರ್‌ನಲ್ಲಿ ಪ್ರಾ.ಸಾ.5ರವರ ಸಹಿ.
ನಿಶಾನೆ ಪಿ–2 : ಬಿ ಎಕ್ಸ್‌ಟ್ರ್ಯಾಕ್ಟ್ ವರದಿ.
ನಿಶಾನೆ ಪಿ–3 : ರಾಸಾಯನಿಕ ವಿಶ್ಲೇಷಕರ ವರದಿ.
ನಿಶಾನೆ ಪಿ–4 : ತನಿಖಾ ವರದಿ.
ನಿಶಾನೆ ಪಿ–4ಎ : ಸದರಿ ವರದಿಯಲ್ಲಿ ಪ್ರಾ.ಸಾ.4ರವರ ಸಹಿ.

**ಅನುಬಂಧ–3**

**ವಾಹನ ಮಾಲೀಕರ ಪರ ವಿಚಾರಣೆಗೆ ಸಲ್ಲಿಸಿದ ಸಾಕ್ಷಿದಾರರು:**

ಡಿಡಬ್ಲ್ಯೂ–1: ಶ್ರೀ.ಆನಂದ ಗೌಡ,ಕಾಯರ್ ತೋಡ್ ಮನೆ,ಗಾಂಧಿನಗರ, ಸುಳ್ಯ ತಾಲೂಕು.

**ಅನುಬಂಧ–4**

**ವಾಹನ ಮಾಲೀಕರ ಪರವಾಗಿ ಗುರುತಿಸಲಾದ ಸಾಕ್ಷಿದಾರರು:**

–ಯಾರೂ ಇರುವುದಿಲ್ಲ–

**ನೂರ್ ಮಹಮ್ಮದ್ ಹುಸೇನ್**

ಪಿ.ಆರ್.1387

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಎಸ್‌ಡಿಕೆ/268/ಡಿಟಿಸಿಆರ್/2008-09 ದಿನಾಂಕ: 20-08-2010**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್

ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**

ಪೊಲೀಸ್ ಉಪ ನಿರೀಕ್ಷಕರು,

ಬಂಟ್ವಾಳ ನಗರ ಪೊಲೀಸ್ ಠಾಣೆ, ಬಂಟ್ವಾಳ.

**ಆರೋಪಿಗಳು:**

ಪರಾರಿಯಾಗಿರುತ್ತಾರೆ.

**ವಾಹನ ಮಾಲೀಕರು:**

ದಿ.ಮ್ಯಾನೇಜರ್, ಐಸಿಐಸಿಐ, ಕೊಚ್ಚಿನ್, ಕೇರಳ ರಾಜ್ಯ.

**ಪ್ರಕರಣದ ಮುಖ್ಯಾಂಶಗಳು:**

ದಿ:17–02–2009 ರಂದು ಫಿರ್ಯಾದುದಾರರಿಗೆ ಬೆಳ್ತಂಗಡಿ ಕಡೆಯಿಂದ ಬಂಟ್ವಾಳ ಮೆಲ್ಕಾರ್ ರಸ್ತೆ ಮಾರ್ಗವಾಗಿ ಕೇರಳಕ್ಕೆ ಮಾರುತಿ ಆಲ್ಟೊ ಕಾರಿನಲ್ಲಿ ಅಕ್ರಮವಾಗಿ ಮದ್ಯ ಸಾಗಾಟ ಮಾಡುತ್ತಿದ್ದಾರೆ ಎಂಬ ದೊರೆತ ಖಚಿತ ವರ್ತಮಾನದ ಮೇರೆಗೆ ಪಂಚರಾದ ಅಹಮದ್ ಶಬೀರ್ ಮತ್ತು ವಿಶ್ವನಾಥ ಗೌಡ ಇವರುಗಳನ್ನು ಠಾಣೆಗೆ ಬರಮಾಡಿಕೊಂಡು, ಹಾಗೂ ತಮ್ಮ ಸಿಬ್ಬಂದಿ ಯವರಾದ ಕಿಟ್ಟುಮೂಲ್ಯ, ಹೆಚ್.ಸಿ 841, ಶೈಲೇಂದ್ರ ಪಿ.ಸಿ.608,ಕುಶಾಲಪ್ಪ ಪಿ.ಸಿ1012, ಪಳನಿವೇಲು ಪಿ.ಸಿ.2173 ಮತ್ತು ಯಜ್ಞ ನಾರಾಯಣ ಎ.ಪಿ.ಸಿ 110, ಹಾಗೂ ಪಂಚರೊಂದಿಗೆ ತಮ್ಮ ಇಲಾಖಾ ಜೀಪಿನಲ್ಲಿ ಠಾಣೆಯಿಂದ ಹೊರಟು, ಬಂಟ್ವಾಳ ತಾಲೂಕು ಮೂಡ ಗ್ರಾಮದ ಬಿ.ಸಿ.ರೋಡ್ ಬೈಪಾಸ್ ಜಂಕ್ಷನ್ ರಸ್ತೆಯ ಬಳಿ ಹೊಂಚು ಹಾಕಿ ಕಾಯುತ್ತಿರುವಾಗ ಬೆಳ್ತಂಗಡಿ–ಬಂಟ್ವಾಳ ಬೈಪಾಸ್ ರಸ್ತೆಯ ಕಡೆಯಿಂದ ಬರುತ್ತಿದ್ದ ಆಲ್ಟೊ ಕಾರನ್ನು ಸಿಬ್ಬಂದಿಯವರಿಗೆ ನಿಲ್ಲಿಸಲು ಸೂಚನೆ ನೀಡಿದಾಗ ಸದರಿ ಕಾರಿನ ಚಾಲಕ ಕಾರನ್ನು ಸ್ವಲ್ಪ ನಿಧಾನಿಸಿ,ಪಕ್ಕನೆ ಬಿ.ಸಿ. ರೋಡ್ ಪೇಟೆ ಕಡೆಗೆ ತಿರುಗಿಸಿ ಮಂಗಳೂರು ಕಡೆಗೆ ಹೋಗುವ ರಸ್ತೆಯಲ್ಲಿ ಚಲಾಯಿಸಿ ಕೊಂಡು ಹೋದಾಗ ಸದರಿ ಮಾರುತಿ ಆಲ್ಟೊ ಕಾರನ್ನು ಬೆನ್ನಟ್ಟಿ, ಹೋಗುತ್ತ ತಲಪಾಡಿ ಎಂಬಲ್ಲಿಗೆ ತಲುಪಿದಾಗ ಸದರಿ ಕಾರಿನ ಚಾಲಕನು ಕಾರನ್ನು ಬ್ರಹ್ಮರ ಕೂಡ್ಲು ಕಡೆಗೆ ಹೋಗುವ ಹಳೆಯ ರಸ್ತೆಯಲ್ಲಿ ಚಲಾಯಿಸಿ,ಕಳ್ಳಿಗೆ ಗ್ರಾಮದ ಬ್ರಹ್ಮರಕೂಡ್ಲು ಸೇತುವೆ ಬಳಿ ಓವರ್‌ಟೇಕ್ ಮಾಡುತ್ತಿದ್ದಂತೆಯೇ ಬೆಳಿಗ್ಗೆ ಸುಮಾರು 7 ಗಂಟೆ ವೇಳೆಗೆ ಸದರಿ ಕಾರಿನ ಚಾಲಕನು ಕಾರನ್ನು ಒಮ್ಮೆಲೆ ರಸ್ತೆಯ ಬದಿಯಲ್ಲಿ ನಿಲ್ಲಿಸಿ, ಕಾರಿನಿಂದ ಹಾರಿ ರಸ್ತೆ ಬದಿಯಲ್ಲಿರುವ ಗುಡ್ಡೆಯ ಕಡೆಗೆ ಓಡಿ ತಪ್ಪಿಸಿಕೊಂಡಿರುತ್ತಾನೆ. ಅನಂತರ ಪಂಚರ ಹಾಗೂ ಸಿಬ್ಬಂದಿಯ ಸಮಕ್ಷಮ ಸದರಿ ಮಾರುತಿ ಆಲ್ಟೊ ಕಾರನ್ನು ಪರಿಶೀಲಿಸಿದಾಗ ಮಾರುತಿ ಆಲ್ಟೊ ಕಾರಿನ ಹಿಂದಿನ ಸೀಟಿನಲ್ಲಿ ಬಿಳಿ ಬಣ್ಣದ ಪ್ಲಾಸ್ಟಿಕ್ ಕ್ಯಾನಿನಲ್ಲಿ ಸ್ಪಿರಿಟ್ ತುಂಬಿದ ಒಟ್ಟು 13 ಪ್ಲಾಸ್ಟಿಕ್ ಕ್ಯಾನುಗಳು ಇಟ್ಟಿರುವುದು ಕಂಡು ಬಂತು. ಸದರಿ ಸ್ಪಿರಿಟ್ ತುಂಬಿದ ಕ್ಯಾನುಗಳನ್ನು ಕಾರಿನಿಂದ ಹೊರಕ್ಕೆ ತೆಗೆದು ಪರಿಶೀಲಿಸಿದಾಗ ಒಂದೊಂದು ಪ್ಲಾಸ್ಟಿಕ್ ಕ್ಯಾನಿನಲ್ಲಿ ತಲಾ 35 ಲೀಟರಿನಂತೆ ಒಟ್ಟು 13 ಪ್ಲಾಸ್ಟಿಕ್ ಕ್ಯಾನುಗಳಲ್ಲಿ 455–000 ಲೀಟರ್ ಸ್ಪಿರಿಟ್ ಇರುವುದು ಕಂಡು ಬಂತು.ಪ್ರತಿಯೊಂದು ಸ್ಪಿರಿಟ್ ತುಂಬಿದ ಕ್ಯಾನುಗಳಿಂದ ತಲಾ ಒಂದೊಂದು ಬಾಟಲಿ ಸ್ಪಿರಿಟನ್ನು ತೆಗೆದು,ಬಾಟಲಿಗೆ ತುಂಬಿಸಿ, ಅವುಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಬಿಳಿಬಟ್ಟೆಗಳಿಂದ ಪ್ಯಾಕ್ ಮಾಡಿ, ಅರಗು ಹಾಕಿ,ಎಸ್. ಹೆಚ್.ಓ ಸೀಲು ಮಾಡಿ,ಸ್ಪಿರಿಟ್ ತುಂಬಿದ ಪ್ಲಾಸ್ಟಿಕ್ ಕ್ಯಾನುಗಳಿಗೆ ಎ ಯಿಂದ ಎಂ ತನಕ ಹಾಗೂ ಮಾದರಿಗಾಗಿ ತೆಗೆದ ಸ್ಪಿರಿಟ್ ತುಂಬಿದ ಬಾಟಲಿಗಳಿಗೆ ಎ 1 ರಿಂದ ಎಂ 1 ರವರೆಗೆ ಕೆಂಪು ಬಣ್ಣದಲ್ಲಿ ಗುರುತು ಮಾಡಲಾಯಿತು.ಸದರಿ ಮಾರುತಿ ಆಲ್ಟೊ ಕಾರಿನ ನೊಂದಣಿ ಸಂ:ಕೆಎಲ್–11–ವೈ–9737 ಆಗಿದ್ದು, ಇದರ ಇಂಜಿನ್ ನಂಬರ್ ಮತ್ತು ಚಾಸಿಸ್ ನಂಬರನ್ನು ಮಹಜರಿನಲ್ಲಿ ನಮೂದಿಸಿರುತ್ತೇನೆ. ಇದು ಅಕ್ರಮ ಮದ್ಯಸಾರವನ್ನು ಕರ್ನಾಟಕ ರಾಜ್ಯದಿಂದ ಕೇರಳ ರಾಜ್ಯಕ್ಕೆ ಸಾಗಿಸಿರುವುದು ಸಾಬೀತಾಗಿರುವುದರಿಂದ ಮದ್ಯಸಾರವನ್ನು ಹಾಗೂ ಸಾಗಾಟಕ್ಕೆ ಬಳಸಿದ ಅಲ್ಟೊ ಕಾರನ್ನು ಇಲಾಖಾ ವಶಕ್ಕೆ ತೆಗೆದುಕೊಂಡು ಈ ಬಗ್ಗೆ ಸ್ಥಳದಲ್ಲಿಯೇ ಮಹಜರನ್ನು ತಯಾರಿಸಿ, ಮಹಜರಿಗೆ ಪಂಚರ ಹಾಗೂ ಸಿಬ್ಬಂದಿಯವರ ಸಹಿಯನ್ನು ಪಡೆದು, ಇದು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 32, 34 ರ ಪ್ರಕಾರ ಅಪರಾಧ ಹಾಗೂ ಶಿಕ್ಷಾರ್ಹವಾಗಿರುವುದರಿಂದ ಓಡಿ ಹೋದ ಆರೋಪಿಗಳ ವಿರುದ್ಧ ತಕ್ಷೀರು ಸಂ:30/2009 ದಿ:17–02–2009ರಂತೆ ಪ್ರಕರಣವನ್ನು ದಾಖಲಿಸಿಕೊಂಡು, ವರದಿಯನ್ನು ಮಾನ್ಯ ನ್ಯಾಯಾಲಯಕ್ಕೆ ಹಾಗೂ ಮೇಲಾಧಿಕಾರಿಗಳಿಗೆ ಮತ್ತು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಪೊಲೀಸ್ ಉಪನಿರೀಕ್ಷಕರು,ಬಂಟ್ವಾಳ ನಗರ ಪೊಲೀಸ್ ಠಾಣೆ,ಬಂಟ್ವಾಳ ಇವರ ವರದಿ ಸಂಖ್ಯೆ ದಿ:21–02–2009 ರ ವರದಿಯಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಸೊತ್ತುಗಳನ್ನು ಅಬಕಾರಿ ನಿರೀಕ್ಷಕರು,ಬಂಟ್ವಾಳ ವಲಯ,ಬಂಟ್ವಾಳ ಇವರಿಗೆ ಹಸ್ತಾಂತರಿಸಲು ಅನುಮತಿ ಆದೇಶ ಕೋರಿರುವ ಮೇರೆಗೆ ಈ ಪ್ರಾಧಿಕಾರದ ಆದೇಶ ಸಂ:ಎಸ್‌ಡಿಕೆ/268/ಡಿಟಿಸಿಆರ್/ 08–09 ದಿ:13–3–2009 ರ ಆದೇಶದಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಆಲ್ಟೊ ಕಾರು ಹಾಗೂ ಮದ್ಯಸಾರವನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43 (ಎ) ರಡಿಯಲ್ಲಿ ಮುಟ್ಟುಗೋಲು ಪ್ರಕ್ರಿಯೆ ನಡೆಸುವ ಬಗ್ಗೆ ಈ ಪ್ರಾದಿಕಾರದ ಪರ ಭದ್ರತಾ ದಾಸ್ತಾನು ಇರಿಸಿಕೊಳ್ಳಲು ಅಬಕಾರಿ ನಿರೀಕ್ಷಕರು,ಬಂಟ್ವಾಳ ವಲಯ ಇವರಿಗೆ ಅನುಮತಿ ಆದೇಶ ನೀಡಿದ್ದು, ಹಾಗೂ ಪ್ರಕರಣದ ತನಿಖೆಯನ್ನು ಪೊಲೀಸ್ ಉಪ ನಿರೀಕ್ಷಕರು,ಬಂಟ್ವಾಳ ನಗರ ಪೊಲೀಸ್ ಠಾಣೆ, ಬಂಟ್ವಾಳ ಇವರು ಮುಂದುವರಿಸಿ, ಪ್ರಕರಣದ ಅಂತಿಮ ದೋಷಾರೋಪಣ ಪಟ್ಟಿಯನ್ನು ಘನ ನ್ಯಾಯಾಲಯದಲ್ಲಿ ಸಲ್ಲಿಸಲು ಅನುಮತಿ ನೀಡಿದೆ.

ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ, ಬಂಟ್ವಾಳ ಇವರ ತನಿಖಾ ವರದಿ ಸಂಖ್ಯೆ: ಸಿಆರ್‌ಎಂ/12/2009–10, ದಿ:20–03–2010 ರ ವರದಿಯಲ್ಲಿ ವಶಪಡಿಸಿಕೊಂಡ ಸೊತ್ತುಗಳನ್ನು ಈ ಪ್ರಾಧಿಕಾರದ ಆದೇಶಾನುಸಾರ ದಿ:08–03 –2010 ರಂದು ಹಸ್ತಾಂತರಿಸಿರುತ್ತಾರೆಂದು ಹಾಗೂ ಇವರ ವರದಿ ಸಂಖ್ಯೆ ದಿ:03–5–2010 ರ ವರದಿಯಲ್ಲಿ ತಕ್ಷೀರಿನಲ್ಲಿ ತೆಗೆದ ಮದ್ಯಸಾರದ ಸ್ಯಾಂಪಲ್ ಗಳನ್ನು ಸಹಾಯಕ ಪೊಲೀಸ್ ಅಧೀಕ್ಷಕರು,ಪುತ್ತೂರು ಉಪವಿಭಾಗ,ಪುತ್ತೂರು ಇವರು ರಾಸಾಯನಿಕ ಪರೀಕ್ಷೆಗಾಗಿ ಕಳುಹಿಸಲಾಗಿದ್ದು, ರಾಸಾಯನಿಕ ವಿಶ್ಲೇಷಕರು, ಮಂಗಳೂರು ಇವರ ವರದಿ ಸಂಖ್ಯೆ:ಇ–21–

13 ದಿ:26–02–2010ರ ವರದಿಯಲ್ಲಿ ಮದ್ಯಸಾರ ಪ್ರಮಾಣ ಶೇ.97 ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ. ಹಾಗೂ ತಕ್ಷೀರಿನಲ್ಲಿ ವಶಪಡಿಸಿಕೊಂಡ ಮಾರುತಿ ಆಲ್ಟೋ ಕಾರು ಸಂಖ್ಯೆ: ಕೆಎಲ್–11–ವೈ–9737ರ ಮಾಲೀಕತ್ವದ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳನ್ನು ಸಂಪರ್ಕಿಸಲಾಗಿದ್ದು, ಅವರಿಂದ ಯಾವುದೇ ಬಿ ಅಬ್ ಸ್ಟ್ರಾಕ್ಟ್ ವರದಿಗಳು ಬಂದಿರುವುದಿಲ್ಲ. ಹಾಗೂ ವಾಹನದ ಮಾಲೀಕತ್ವ ಬಗ್ಗೆ ಯಾರೂ ಕೂಡ ಕಚೇರಿಯನ್ನು ಸಂಪರ್ಕಿಸಿ, ವಾಹನದ ಬಿಡುಗಡೆಗಾಗಿ ವಾಹನದ ಮಾಲೀಕರಾಗಲೀ, ಅವರ ಪರ ವಕೀಲ ರಾಗಲೀ ಹಾಗೂ ಓಡಿ ಹೋದ ಆರೋಪಿಯಾಗಲೀ, ಹಾಜರಾಗಿ ಯಾವುದೇ ಅಧಿಕೃತ ದಾಖಲಾತಿಗಳೊಂದಿಗೆ ವಾಹನದ ಬಿಡುಗಡೆಗಾಗಿ ಯಾರೂ ಕೂಡ ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ಆದುದರಿಂದ ತಕ್ಷೀರಿನಲ್ಲಿ ವಶಪಡಿಸಿಕೊಂಡ ಮದ್ಯಸಾರ ಹಾಗೂ ಸಾಗಾಟಕ್ಕೆ ಬಳಸಿದ ಮಾರುತಿ ಆಲ್ಟೋ ಕಾರನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು,ಮದ್ಯಸಾರವನ್ನು ನಾಶಪಡಿಸಲು ಹಾಗೂ ವಾಹನವನ್ನು ಬಹಿರಂಗ ಹರಾಜಿನಲ್ಲಿ ವಿಲೇವಾರಿಗೊಳಿಸಬೇಕೆಂದು ಶಿಫಾರಸ್ಸು ಮಾಡಿರುತ್ತಾರೆ.

ಅಬಕಾರಿ ನಿರೀಕ್ಷಕರ ತನಿಖಾ ವರದಿಯನ್ನು ಆಧರಿಸಿ,ಈ ಪ್ರಾಧಿಕಾರದ ಆದೇಶ ಸಂ:ಎಸ್‌ಡಿಕೆ/268/ಡಿಟಿಸಿಆರ್/08–09 ದಿ:25–5–2010 ರ ಆದೇಶದಲ್ಲಿ ತಕ್ಷೀರಿನಲ್ಲಿ ಜಪ್ತುಪಡಿಸಲಾಗಿರುವ ಸೊತ್ತುಗಳ ಪೈಕಿ ಮಾರುತಿ ಆಲ್ಟೋ ಕಾರಿನ ಮುಟ್ಟುಗೋಲು ಪ್ರಕ್ರಿಯೆಯನ್ನು ಕಾಯ್ದಿರಿಸಿ, ಉಳಿದ 455–000 ಲೀಟರ್ ಮದ್ಯಸಾರದಲ್ಲಿ ರಾಸಾಯನಿಕ ವಿಶ್ಲೇಷಣೆಗೆ ತೆಗೆದ ಮಾದರಿಗಳನ್ನು ಹೊರತುಪಡಿಸಿ,ಉಳಿದ ಮದ್ಯಸಾರವನ್ನು ಕರ್ನಾಟಕ ಅಬಕಾರಿ ಕಾಯಿದೆ 1965 ಕಲಂ 43 (ಸಿ)ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು,ಮಹಜರು ಜರುಗಿಸಿ, ನಿಯಮಾನುಸಾರ ನಾಶಪಡಿಸಲು ಆದೇಶಿಸಲಾಗಿದೆ. ಸದರಿ ಆದೇಶದಂತೆ ಅಬಕಾರಿ ಉಪ ಅಧೀಕ್ಷಕರು, ಬಂಟ್ವಾಳ ಉಪವಿಭಾಗ,ಬಂಟ್ವಾಳ ಇವರ ವರದಿ ಸಂ:36/2009–10 ದಿ:12–6–2010 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ 445–250 ಲೀಟರ್ ಮದ್ಯಸಾರವನ್ನು ಮಹಜರು ಜರುಗಿಸಿ, ನಾಶಪಡಿಸಿ ವರದಿ ಸಲ್ಲಿಸಿರುತ್ತಾರೆ.

ಅಬಕಾರಿ ನಿರೀಕ್ಷಕರು,ಬಂಟ್ವಾಳ ವಲಯ,ಬಂಟ್ವಾಳ ಇವರ ವರದಿ ಸಂ:ಆರ್.ಸಿ.ಆರ್/12/09–10 ದಿ:2–6–2010 ರ ವರದಿಯಲ್ಲಿ ಜಪ್ತಾದ ಮಾರುತಿ ಆಲ್ಟೋ ಕಾರಿನ ಬಿ ಅಬ್‌ಸ್ಟ್ರಾಕ್ಟ್ ವರದಿಯನ್ನು ಪೊಲೀಸ್ ಇಲಾಖೆಯವರು ಈ ಕಚೇರಿಗೆ ಒಪ್ಪಿಸಿದ್ದು,ಸದರಿ ವಾಹನದ ನೊಂದಣಿ ಮಾಲೀಕ ದಿ.ಮ್ಯಾನೇಜರ್,ಐಸಿಐಸಿಐ,ಕೊಚ್ಚಿನ್,ಕೇರಳ ಎಂಬುದಾಗಿ ಬಿ.ಅಬ್‌ಸ್ಟ್ರಾಕ್ಟ್ ವರದಿ ಯಲ್ಲಿ ದೃಢೀಕರಿಸಿ ನೀಡಿರುತ್ತಾರೆ. ಸದರಿ ಬಿ ಅಬ್‌ಸ್ಟ್ರಾಕ್ಟ್ ವರದಿಯ ಅನುಸಾರ ವಾಹನದ ನೊಂದಣಿ ಮಾಲೀಕರಾದ ದಿ.ಮ್ಯಾನೇಜರ್ ಇವರಿಗೆ ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯಿದೆ 43 (ಬಿ)ಪ್ರಕಾರ ಕಾರಣ ಕೇಳಿ ನೋಟೀಸನ್ನು ದಿ:09–06–2010 ರಂದು ನೊಂದಣಿ ಅಂಚೆ ಮೂಲಕ ನೀಡಲಾಗಿದ್ದು,ಸದರಿ ಕಾರಣ ಕೇಳಿ ನೋಟೀಸು ಸ್ವೀಕೃತಿಯಾಗಿ ಸ್ವೀಕೃತಿ ರಶೀದಿ ಬಂದಿದ್ದು, ಈ ಬಗ್ಗೆ ಐ.ಸಿ.ಐ.ಸಿ.ಐ ಬ್ಯಾಂಕ್,ಕೊಚ್ಚಿನ್ ಇದರ ಮೇಲ್ವಿಚಾರಕರು ದಿ:04–08–2010 ರಂದು ಈ ಪ್ರಾದಿಕಾರವು ನೀಡಿದ ಕಾರಣ ಕೇಳಿ ನೋಟೀಸಿಗೆ ಉತ್ತರವನ್ನು ಸಲ್ಲಿಸುತ್ತಾ, ಸದರಿ ವಾಹನವನ್ನು ದಿ:24–03–2008ರಂದು ಶ್ರೀ ಅಹಮದ್ ಖೋಯಾ ಇವರಿಗೆ ಸೇರಿದ್ದಾಗಿದ್ದು ಎಂಬುದಾಗಿ ತಿಳಿಸಿರುತ್ತಾರೆ. ಆದರೆ ಈ ಬಗ್ಗೆ ಯಾವುದೇ ಬಿ ಅಬ್‌ಸ್ಟ್ರಾಕ್ಟ್ ವರದಿ ಅಥವಾ ದಾಖಲಾತಿಗಳನ್ನು ಒಪ್ಪಿಸಿರುವುದಿಲ್ಲ.

ನಂತರ ಪ್ರಕರಣದ ವಿಚಾರಣೆಯನ್ನು ಆರಂಭಿಸಿ, ಈ ಪ್ರಕರಣದಲ್ಲಿ ಈ ಕೆಳಗಿನಂತೆ ವಿವಾದಾಂಶಗಳು ಉದ್ಭವಿಸುತ್ತದೆ.

1) ಮೊದಲನೇ ವಿವಾದಾಂಶ: ದಿ:17-02-2009 ರಂದು ಮಾರುತಿ ಆಲ್ಟೋ ಕಾರು ಸಂ:ಕೆಎಲ್ 11 ವೈ–9737 ರಲ್ಲಿ ವಾಹನದ ಮಾಲೀಕರ ತಿಳುವಳಿಕೆಯಿಂದಲೇ ಅಕ್ರಮವಾಗಿ ಮದ್ಯಸಾರ ಸಾಗಾಣಿಕೆಯಾಗಿದೆಯೇ? ಮತ್ತು ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ ಮತ್ತು ನಿಯಮಗಳ ರೀತ್ಯಾ ಉಲ್ಲಂಘನೆಗೆ ಬಳಸಲಾಗಿದೆಯೇ?

2) ಎರಡನೇ ವಿವಾದಾಂಶ: ಸದರಿ ವಾಹನದಲ್ಲಿ ಅಕ್ರಮವಾಗಿ ಮದ್ಯಸಾರ ಸಾಗಾಣಿಕೆಯಾಗಿರುವುದರ ಬಗ್ಗೆ ವಾಹನ ಮಾಲೀಕರಿಗೆ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೆ ನಡೆದಿದೆ ಹಾಗೂ ಇದರ ಬಗ್ಗೆ ಅವರು ಸಾಕಷ್ಟು ಮುಂಜಾಗ್ರತ ಕ್ರಮವನ್ನು ಕೈಗೊಳ್ಳಲಾಗಿತ್ತು ಎಂಬ ಅಂಶವನ್ನು ಆರೋಪಿಗಳು ಮತ್ತು ವಾಹನ ಮಾಲೀಕರು ಈ ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲವೇ?

3 ) ಮೂರನೇ ವಿವಾದಾಂಶ: ಜಪ್ತುಪಡಿಸಲಾದ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ಅಥವಾ ಇಲ್ಲವೇ?

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ: 1**

ಶ್ರೀ ಮಾಧವ ಕೂಡ್ಲು,ಪೂಂಜಲಕಟ್ಟೆ ಔಟ್ ಪೋಸ್ಟ್, ಬಂಟ್ವಾಳ ಇವರು ಪ್ರಕರಣದ ಫಿರ್ಯಾದುದಾರರಾಗಿದ್ದು,ಇವರು ದಿ:17–08–2010 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಎಡಿಪಿಯವರ ಮುಖ್ಯ ವಿಚಾರಣೆಗೆ ಉತ್ತರವನ್ನು ನೀಡುತ್ತಾ, ತಾನು ಬಂಟ್ವಾಳ ನಗರ ಪೊಲೀಸ್ ಠಾಣೆಯಲ್ಲಿ ಪೊಲೀಸ್ ಉಪ ನಿರೀಕ್ಷಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ತನಗೆ ದಿ:17–02–2009 ರಂದು ಬೆಳ್ತಂಗಡಿ ಕಡೆಯಿಂದ ಬಂಟ್ವಾಳ ಮೆಲ್ಕಾರ್ ರಸ್ತೆಯಿಂದ ಕೇರಳಕ್ಕೆ ಮಾರುತಿ ಆಲ್ಟೋ ಕಾರಿನಲ್ಲಿ ಅಕ್ರಮವಾಗಿ ಮದ್ಯ ಸಾಗಾಟ ಮಾಡುತ್ತಿದ್ದಾರೆ ಎಂಬ ದೊರೆತ ಖಚಿತ ವರ್ತಮಾನದ ಮೇರೆಗೆ ಪಂಚರಾದ ಅಹಮದ್ ಶಬೀರ್ ಮತ್ತು ವಿಶ್ವನಾಥ ಗೌಡ ಇವರುಗಳನ್ನು ಠಾಣೆಗೆ ಬರಮಾಡಿಕೊಂಡು, ತಮ್ಮ ಸಿಬ್ಬಂದಿಯವರಾದ ಕಿಟ್ಟುಮೂಲ್ಯ,ಹೆಚ್.ಸಿ 841, ಶೈಲೇಂದ್ರ ಪಿ.ಸಿ.608,ಕುಶಾಲಪ್ಪ ಪಿ.ಸಿ1012, ಪಳನಿವೇಲು ಪಿ.ಸಿ.2173 ಮತ್ತು ಯಜ್ಞನಾರಾಯಣ ಎ.ಪಿ.ಸಿ 110, ಹಾಗೂ ಪಂಚರೊಂದಿಗೆ ತಮ್ಮ ಇಲಾಖಾ ಜೀಪಿನಲ್ಲಿ ಠಾಣೆಯಿಂದ ಹೊರಟು, ಬಂಟ್ವಾಳ ತಾಲೂಕು ಮೂಡ ಗ್ರಾಮದ ಬಿ.ಸಿ.ರೋಡ್ ಬೈಪಾಸ್ ಜಂಕ್ಷನ್ ರಸ್ತೆಯ ಬಳಿ ಹೊಂಚು ಹಾಕಿ ಕಾಯುತ್ತಿರುವಾಗ ಬೆಳ್ತಂಗಡಿ–ಬಂಟ್ವಾಳ ಬೈಪಾಸ್ ರಸ್ತೆಯ ಕಡೆಯಿಂದ ಬರುತ್ತಿದ್ದ ಆಲ್ಟೋ ಕಾರನ್ನು ಸಿಬ್ಬಂದಿಯವರಿಗೆ ನಿಲ್ಲಿಸಲು ಸೂಚನೆ ನೀಡಿದಾಗ ಸದರಿ ಕಾರಿನ ಚಾಲಕ ಕಾರನ್ನು ಸ್ವಲ್ಪ ನಿಧಾನಿಸಿ,ಪಕ್ಕನೆ ಬಿ.ಸಿ.ರೋಡ್ ಪೇಟೆ ಕಡೆಗೆ ತಿರುಗಿಸಿಮಂಗಳೂರು ಕಡೆಗೆ ಹೋಗುವ ರಸ್ತೆಯಲ್ಲಿ ಚಲಾಯಿಸಿಕೊಂಡು ಹೋದಾಗ ಸದರಿ ಮಾರುತಿ ಆಲ್ಟೋ ಕಾರನ್ನು ನಾವುಗಳು ಬೆನ್ನಟ್ಟಿ, ಹೋಗುತ್ತತಲಪಾಡಿ ಎಂಬಲ್ಲಿಗೆ ತಲುಪಿದಾಗ ಸದರಿ ಕಾರಿನ ಚಾಲಕನು ಕಾರನ್ನು ಬ್ರಹ್ಮರಕೂಡ್ಲು ಕಡೆಗೆ ಹೋಗುವ ಹಳೆಯ ರಸ್ತೆಯಲ್ಲಿ ಚಲಾಯಿಸಿ,ಕಳ್ಳಿಗೆ ಗ್ರಾಮದ ಬ್ರಹ್ಮರಕೂಡ್ಲು ಸೇತುವೆ ಬಳಿ ಓವರ್‌ಟೇಕ್

ಮಾಡುತ್ತಿದ್ದಂತೆಯೇ ಬೆಳಿಗ್ಗೆ ಸುಮಾರು 7 ಗಂಟೆ ವೇಳೆಗೆ ಸದರಿ ಕಾರಿನ ಚಾಲಕನು ಕಾರನ್ನು ಒಮ್ಮೆಲೆ ರಸ್ತೆಯ ಬದಿಯಲ್ಲಿ ನಿಲ್ಲಿಸಿ, ಕಾರಿನಿಂದ ಒಮ್ಮೆಲೆ ಹಾರಿ ರಸ್ತೆ ಬದಿಯಲ್ಲಿರುವ ಗುಡ್ಡೆಯ ಕಡೆಗೆ ಓಡಿ ತಪ್ಪಿಸಿಕೊಂಡಿರುತ್ತಾನೆ. ಅನಂತರ ಪಂಚರ ಹಾಗೂ ಸಿಬ್ಬಂದಿಯ ಸಮಕ್ಷಮ ಸದರಿ ಮಾರುತಿಆಲ್ಟೋ ಕಾರನ್ನು ಪರಿಶೀಲಿಸಿದಾಗ ಮಾರುತಿ ಆಲ್ಟೋ ಕಾರಿನ ಹಿಂದಿನ ಸೀಟಿನಲ್ಲಿ ಬಿಳಿ ಬಣ್ಣದ ಪ್ಲಾಸ್ಟಿಕ್ ಕ್ಯಾನಿನಲ್ಲಿ ಸ್ಪಿರಿಟ್ ತುಂಬಿದ ಒಟ್ಟು 13 ಪ್ಲಾಸ್ಟಿಕ್ ಕ್ಯಾನುಗಳು ಇಟ್ಟಿರುವುದು ಕಂಡು ಬಂತು. ಸದರಿ ಸ್ಪಿರಿಟ್ ತುಂಬಿದ ಕ್ಯಾನುಗಳನ್ನು ಕಾರಿನಿಂದ ಹೊರಕ್ಕೆ ತೆಗೆದು ಪರಿಶೀಲಿಸಿದಾಗ ಒಂದೊಂದು ಪ್ಲಾಸ್ಟಿಕ್ ಕ್ಯಾನಿನಲ್ಲಿ ತಲಾ 35 ಲೀಟರಿನಂತೆ ಒಟ್ಟು 13 ಪ್ಲಾಸ್ಟಿಕ್ ಕ್ಯಾನುಗಳಲ್ಲಿ 455 ಲೀಟರ್ ಸ್ಪಿರಿಟ್ ಇರುವುದು ಕಂಡು ಬಂತು. ಪ್ರತಿಯೊಂದು ಸ್ಪಿರಿಟ್ ತುಂಬಿದ ಕ್ಯಾನುಗಳಿಂದ ತಲಾ ಒಂದೊಂದು ಬಾಟಲಿ ಸ್ಪಿರಿಟನ್ನು ತೆಗೆದು, ತುಂಬಿಸಿ, ಅವುಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಬಿಳಿಬಟ್ಟೆಗಳಿಂದ ಪ್ಯಾಕ್ ಮಾಡಿ, ಅರಗು ಹಾಕಿ,ಎಸ್.ಹೆಚ್.ಓ ಸೀಲು ಮಾಡಿ,ಸ್ಪಿರಿಟ್ ತುಂಬಿದ ಪ್ಲಾಸ್ಟಿಕ್ ಕ್ಯಾನುಗಳಿಗೆ ಎ ಯಿಂದ ಎಂ.ತನಕ ಹಾಗೂ ಮಾದರಿಗಾಗಿ ತೆಗೆದ ಸ್ಪಿರಿಟ್ ತುಂಬಿದ ಬಾಟಲಿಗಳಿಗೆ ಎ 1 ರಿಂದ ಎಂ. 1 ರವರೆಗೆ ಕೆಂಪು ಬಣ್ಣದಲ್ಲಿ ಗುರುತು ಮಾಡಲಾಯಿತು. ಸದರಿ ಮಾರುತಿ ಆಲ್ಟೋ ಕಾರಿನ ನೊಂದಣಿ ಸಂ:ಕೆಎಲ್–11–ವೈ–9737 ಆಗಿದ್ದು, ಇದರ ಇಂಜಿನ್ ನಂ. ಮತ್ತು ಚಾಸಿಸ್ ನಂಬರನ್ನು ಮಹಜರಿನಲ್ಲಿ ನಮೂದಿಸಿರುತ್ತೇನೆ. ಇದು ಅಕ್ರಮ ಮದ್ಯಸಾರವನ್ನು ಕರ್ನಾಟಕ ರಾಜ್ಯದಿಂದ ಕೇರಳ ರಾಜ್ಯಕ್ಕೆ ಸಾಗಿಸಿರುವುದು ಸಾಬೀತಾಗಿರುವುದರಿಂದ ಮದ್ಯಸಾರವನ್ನು ಹಾಗೂ ಸಾಗಾಟಕ್ಕೆ ಬಳಸಿದ ಅಲ್ಟೋ ಕಾರನ್ನು ಇಲಾಖಾ ವಶಕ್ಕೆ ತೆಗೆದುಕೊಂಡು ಈ ಬಗ್ಗೆ ಸ್ಥಳದಲ್ಲಿಯೇ ಮಹಜರನ್ನು ಪಂಚರ ಹಾಗೂ ಸಿಬ್ಬಂದಿಯವರ ಸಹಾಯದಿಂದ ತಯಾರಿಸಿರುತ್ತೇನೆ. ಸದರಿ ಮಹಜರಿನ ಪ್ರತಿಯನ್ನು ನಿಶಾನೆ ಪಿ–1 ಎಂದು ಅದರಲ್ಲಿರುವ ತನ್ನ ಸಹಿಯನ್ನು ನಿ.ಪಿ.–1ಎ ಎಂದು ಗುರುತಿಸಿರುತ್ತೇನೆ..ನಂತರ ಠಾಣೆಗೆ ಬಂದು, ಈ ಬಗ್ಗೆ ಪ್ರ.ಮಾ.ವ ನ್ನು ತಯಾರಿಸಿ, ಅದನ್ನು ನಿ.ಪಿ–2 ಎಂದು ಅದರಲ್ಲಿರುವ ತನ್ನ ಸಹಿಯನ್ನು ನಿ.ಪಿ–2ಎ ಎಂದು ಗುರುತಿಸಿರುತ್ತೇನೆ. ಸೊತ್ತಿನ ಪಟ್ಟಿಯನ್ನು ನಿ.ಪಿ–3 ಎಂದು ಅದರಲ್ಲಿರುವ ತನ್ನ ಸಹಿಯನ್ನು ನಿ.ಪಿ–3ಎ ಎಂದು ಗುರುತಿಸಿರುತ್ತೇನೆ ಈ ಬಗ್ಗೆ ಅಧಿಕೃತ ಅಧಿಕಾರಿಗಳು, ಹಾಗೂ ಅಬಕಾರಿ ಅಧೀಕ್ಷಕರು, ದ.ಕ ಜಿಲ್ಲೆ, ಮಂಗಳೂರು ಇವರಿಗೆ ಸದರಿ ಸೊತ್ತುಗಳನ್ನು ಹಸ್ತಾಂತರಿಸುವ ಬಗ್ಗೆ ವರದಿಯನ್ನು ಈ ಪ್ರಾಧಿಕಾರಕ್ಕೆ ದಿ:21–2–2009 ರಂದು ಸಲ್ಲಿಸಿರುತ್ತೇನೆ. ಸದರಿ ವರದಿಯನ್ನು ನಿ.ಪಿ–4 ಎಂದು ಮತ್ತು ಅದರಲ್ಲಿರುವ ನನ್ನ ಸಹಿಯನ್ನು ನಿ.ಪಿ.4 ಎ ಎಂದು ಗುರುತಿಸಿರುತ್ತೇನೆ. ಹಾಗೂ ಜಪ್ತುಪಡಿಸಿಕೊಂಡ ವಾಹನವನ್ನು ಕೂಡ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬೇಕೆಂದು ನ್ಯಾಯಾಲಯದ ಮುಂದೆ ವಿನಂತಿಸಿ ಕೊಳ್ಳುತ್ತೇನೆ ಎಂದು ಸಾಕ್ಷಿ ನುಡಿದಿರುತ್ತಾರೆ.

ವಾಹನದ ಮಾಲೀಕರಾಗಲೀ ಮಾಲೀಕರ ಪರ ಪ್ರತಿನಿಧಿಗಳಾಗಲೀ ಪ್ರಾಧಿಕಾರದ ಮುಂದೆ ಹಾಜರಾಗದೇ ಇರುವುದರಿಂದ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಯಿತು.

**ಪ್ರಾ.ಸಾ–2:–**

ಶ್ರೀ ಕುಶಾಲಪ್ಪ,ಪಿ.ಸಿ.–1012, ಬಂಟ್ವಾಳ ನಗರ ಪೊಲೀಸ್ ಠಾಣೆ,ಬಂಟ್ವಾಳ ಇವರು ಪ್ರಕರಣದ ಮಹಜರು ಸಾಕ್ಷಿದಾರರಾಗಿದ್ದು, ಇವರು ದಿ:17–08–2010 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಎಡಿಪಿಯವರ ಮುಖ್ಯ ವಿಚಾರಣೆಗೆ ಉತ್ತರವನ್ನು ನೀಡುತ್ತಾ, ತಾನು ಬಂಟ್ವಾಳ ನಗರ ಪೊಲೀಸ್ ಠಾಣೆಯಲ್ಲಿ ಪೊಲೀಸ್ ಪೇದೆಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ತಾನು ದಿ:17–02–2009 ರಂದು ಪೊಲೀಸ್ ಉಪ ನಿರೀಕ್ಷಕರಿಗೆ ಬೆಳ್ತಂಗಡಿ ಕಡೆಯಿಂದ ಬಂಟ್ವಾಳ ಮೆಲ್ಕಾರ್ ರಸ್ತೆಯಿಂದ ಕೇರಳಕ್ಕೆ ಮಾರುತಿ ಆಲ್ಟೋ ಕಾರಿನಲ್ಲಿ ಅಕ್ರಮವಾಗಿ ಮದ್ಯ ಸಾಗಾಟ ಮಾಡುತ್ತಿದ್ದಾರೆ ಎಂಬ ದೊರೆತ ಖಚಿತ ವರ್ತಮಾನದ ಮೇರೆಗೆ ಪಂಚ ಹಾಗೂ ಇತರ ಸಿಬ್ಬಂದಿಯವರೊಂದಿಗೆ ತಮ್ಮ ಇಲಾಖಾ ಜೀಪಿನಲ್ಲಿ ಠಾಣೆಯಿಂದ ಹೊರಟು, ಬಂಟ್ವಾಳ ತಾಲೂಕು ಮೂಡ ಗ್ರಾಮದ ಬಿ.ಸಿ.ರೋಡ್ ಬೈಪಾಸ್ ಜಂಕ್ಷನ್ ರಸ್ತೆಯ ಬಳಿ ಹೊಂಚು ಹಾಕಿ ಕಾಯುತ್ತಿರುವಾಗ ಬೆಳ್ತಂಗಡಿ–ಬಂಟ್ವಾಳ ಬೈಪಾಸ್ ರಸ್ತೆಯ ಕಡೆಯಿಂದ ಬರುತ್ತಿದ್ದ ಆಲ್ಟೋ ಕಾರನ್ನು ಸಿಬ್ಬಂದಿಯವರಿಗೆ ನಿಲ್ಲಿಸಲು ಸೂಚನೆ ನೀಡಿದಾಗ ಸದರಿ ಕಾರಿನ ಚಾಲಕ ಕಾರನ್ನು ಸ್ವಲ್ಪ ನಿಧಾನಿಸಿ,ಪಕ್ಕನೆ ಬಿ.ಸಿ.ರೋಡ್ ಪೇಟೆ ಕಡೆಗೆ ತಿರುಗಿಸಿಮಂಗಳೂರು ಕಡೆಗೆ ಹೋಗುವ ರಸ್ತೆಯಲ್ಲಿ ಚಲಾಯಿಸಿಕೊಂಡು ಹೋದಾಗ ಸದರಿ ಮಾರುತಿ ಆಲ್ಟೋ ಕಾರನ್ನು ಬೆನ್ನಟ್ಟಿ, ಹೋಗುತ್ತ ತಲಪಾಡಿ ಎಂಬಲ್ಲಿಗೆ ತಲುಪಿದಾಗ ಸದರಿ ಕಾರಿನ ಚಾಲಕನು ಕಾರನ್ನು ಬ್ರಹ್ಮರಕೂಡ್ಲು ಕಡೆಗೆ ಹೋಗುವ ಹಳೆಯ ರಸ್ತೆಯಲ್ಲಿ ಚಲಾಯಿಸಿ,ಕಳ್ಳಿಗೆ ಗ್ರಾಮದ ಬ್ರಹ್ಮರಕೂಡ್ಲು ಸೇತುವೆ ಬಳಿ ಓವರ್‌ಟೇಕ್ ಮಾಡುತ್ತಿದ್ದಂತೆಯೇ ಬೆಳಿಗ್ಗೆ ಸುಮಾರು 7 ಗಂಟೆ ವೇಳೆಗೆ ಸದರಿ ಕಾರಿನ ಚಾಲಕನು ಕಾರನ್ನು ಒಮ್ಮೆಲೆ ರಸ್ತೆಯ ಬದಿಯಲ್ಲಿ ನಿಲ್ಲಿಸಿ, ಕಾರಿನಿಂದ ಒಮ್ಮೆಲೆ ಹಾರಿ ರಸ್ತೆ ಬದಿಯಲ್ಲಿರುವ ಗುಡ್ಡೆಯ ಕಡೆಗೆ ಓಡಿ ತಪ್ಪಿಸಿಕೊಂಡಿರುತ್ತಾನೆ. ಅನಂತರ ಪಂಚರ ಹಾಗೂ ಸಿಬ್ಬಂದಿಯ ಹಾಗೂ ಪೊಲೀಸ್ ಉಪ ನಿರೀಕ್ಷಕರ ಸಮಕ್ಷಮ ಸದರಿ ಮಾರುತಿಆಲ್ಟೋ ಕಾರನ್ನು ಪರಿಶೀಲಿಸಿದಾಗ ಮಾರುತಿ ಆಲ್ಟೋ ಕಾರಿನ ಹಿಂದಿನ ಸೀಟಿನಲ್ಲಿ ಬಿಳಿ ಬಣ್ಣದ ಪ್ಲಾಸ್ಟಿಕ್ ಕ್ಯಾನಿನಲ್ಲಿ ಸ್ಪಿರಿಟ್ ತುಂಬಿದ ಒಟ್ಟು 13 ಪ್ಲಾಸ್ಟಿಕ್ ಕ್ಯಾನುಗಳು ಇಟ್ಟಿರುವುದು ಕಂಡು ಬಂತು. ಸದರಿ ಸ್ಪಿರಿಟ್ ತುಂಬಿದ ಕ್ಯಾನುಗಳನ್ನು ಕಾರಿನಿಂದ ಹೊರಕ್ಕೆ ತೆಗೆದು ಪರಿಶೀಲಿಸಿದಾಗ ಒಂದೊಂದು ಪ್ಲಾಸ್ಟಿಕ್ ಕ್ಯಾನಿನಲ್ಲಿ ತಲಾ 35 ಲೀಟರಿನಂತೆ ಒಟ್ಟು 13 ಪ್ಲಾಸ್ಟಿಕ್ ಕ್ಯಾನುಗಳಲ್ಲಿ 455 ಲೀಟರ್ ಸ್ಪಿರಿಟ್ ಇರುವುದು ಕಂಡು ಬಂತು.ಪ್ರತಿಯೊಂದು ಸ್ಪಿರಿಟ್ ತುಂಬಿದ ಕ್ಯಾನುಗಳಿಂದ ತಲಾ ಒಂದೊಂದು ಬಾಟಲಿ ಸ್ಪಿರಿಟನ್ನು ತೆಗೆದು, ತುಂಬಿಸಿ, ಅವುಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಬಿಳಿಬಟ್ಟೆಗಳಿಂದ ಪ್ಯಾಕ್ ಮಾಡಿ, ಅರಗು ಹಾಕಿ,ಎಸ್.ಹೆಚ್.ಓ ಸೀಲು ಮಾಡಿ,ಸ್ಪಿರಿಟ್ ತುಂಬಿದ ಪ್ಲಾಸ್ಟಿಕ್ ಕ್ಯಾನುಗಳಿಗೆ ಎ ಯಿಂದ ಎಂ.ತನಕ ಹಾಗೂ ಮಾದರಿಗಾಗಿ ತೆಗೆದ ಸ್ಪಿರಿಟ್ ತುಂಬಿದ ಬಾಟಲಿಗಳಿಗೆ ಎ 1 ರಿಂದ ಎಂ. 1 ರವರೆಗೆ ಕೆಂಪು ಬಣ್ಣದಲ್ಲಿ ಗುರುತು ಮಾಡಲಾಯಿತು.ಸದರಿ ಮಾರುತಿ ಆಲ್ಟೋ ಕಾರಿನ ನೊಂದಣಿ ಸಂ:ಕೆಎಲ್–11–ವೈ–9737 ಆಗಿದ್ದು, ಇದರ ಇಂಜಿನ್ ನಂ. ಮತ್ತು ಚಾಸಿಸ್ ನಂಬರನ್ನು ಮಹಜರಿನಲ್ಲಿ ನಮೂದಿಸಿರುತ್ತೇನೆ. ಇದು ಅಕ್ರಮ ಮದ್ಯಸಾರವನ್ನು ಕರ್ನಾಟಕ ರಾಜ್ಯದಿಂದ ಕೇರಳ ರಾಜ್ಯಕ್ಕೆ ಸಾಗಿಸಿರುವುದು ಸಾಬೀತಾ ಗಿರುವುದರಿಂದ ಮದ್ಯಸಾರವನ್ನು ಹಾಗೂ ಸಾಗಾಟಕ್ಕೆ ಬಳಸಿದ ಅಲ್ಟೋ ಕಾರನ್ನು ಇಲಾಖಾ ವಶಕ್ಕೆ ತೆಗೆದುಕೊಂಡು ಈ ಬಗ್ಗೆ ಸ್ಥಳದಲ್ಲಿಯೇ ಮಹಜರನ್ನು ಪಂಚರ ಹಾಗೂ ಸಿಬ್ಬಂದಿಯವರ ಸಹಾಯದಿಂದ ತಯಾರಿಸಿರುತ್ತಾರೆ.ಸದರಿ ಮಹಜರನ್ನು ಈಗಾಗಲೇ ನಿಶಾನೆ ಪಿ–1 ಎಂದು ಗುರುತಿಸಲಾಗಿದ್ದು,ಅದರಲ್ಲಿರುವ ತನ್ನ ಸಹಿಯನ್ನು ನಿ.ಪಿ.–1 ಬಿ ಎಂದು ಗುರುತಿಸಿರುತ್ತೇನೆ. ಹಾಗೂ ಜಪ್ತುಪಡಿಸಿಕೊಂಡ ವಾಹನವನ್ನು ಕೂಡ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಕೊಳ್ಳಬೇಕೆಂದು ನ್ಯಾಯಾಲಯದ ಮುಂದೆ ವಿನಂತಿಸಿಕೊಳ್ಳುತ್ತೇನೆ. ಎಂದು ಸಾಕ್ಷಿ ನುಡಿದಿರುತ್ತಾರೆ.

ವಾಹನದ ಮಾಲೀಕರಾಗಲೀ ಮಾಲೀಕರ ಪರ ಪ್ರತಿನಿಧಿಗಳಾಗಲೀ ಪ್ರಾಧಿಕಾರದ ಮುಂದೆ ಹಾಜರಾಗದೇ ಇರುವುದರಿಂದ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಯಿತು.

**ಪ್ರಾ.ಸಾ–3 :–**

ಶ್ರೀ ಕಮಲಾಕ್ಷ ಬಲ್ಯಾಯ, ಅಬಕಾರಿ ನಿರೀಕ್ಷಕರು,ಬಂಟ್ವಾಳ ವಲಯ,ಬಂಟ್ವಾಳ ಇವರು ಪ್ರಕರಣದ ತನಿಖಾಧಿಯಾರಿಯಾಗಿದ್ದು, ಇವರು ದಿ:17–08–2010 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಎಡಿಪಿಯವರ ಮುಖ್ಯ ವಿಚಾರಣೆಗೆ ಉತ್ತರವನ್ನು ನೀಡುತ್ತಾ,ತಾನು ಬಂಟ್ವಾಳ ವಲಯ ಅಬಕಾರಿ ನಿರೀಕ್ಷಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ಈ ಪ್ರಾಧಿಕಾರದ ಆದೇಶ ಸಂ:ಎಸ್‌ಡಿಕೆ/268/ಡಿಟಿಸಿಆರ್/08–09 ದಿ:13–3–2009 ರ ಆದೇಶದಂತೆ ತಕ್ಷೀರಿನಲ್ಲಿ ವಶಪಡಿಸಿಕೊಂಡ ಮಾರುತಿ ಆಲ್ಟೊ ಕಾರು ಹಾಗೂ ಮದ್ಯಸಾರದಿಂದ ತೆಗೆದ ಸ್ಯಾಂಪಲುಗಳನ್ನು ಹೊರತುಪಡಿಸಿ ಉಳಿದ ಮದ್ಯಸಾರವನ್ನು ದಿ:18–3 –2010 ರಂದು ಪೊಲೀಸ್ ಉಪ ನಿರೀಕ್ಷಕರು,ಬಂಟ್ವಾಳ ನಗರ ಪೊಲೀಸ್ ಠಾಣೆ ಇವರಿಂದ ಪಡೆದುಕೊಂಡಿರುತ್ತೇನೆ. ಈ ಬಗ್ಗೆ ವರದಿಯನ್ನು ಈ ಪ್ರಾಧಿಕಾರಕ್ಕೆ ದಿ:20–3–2010 ರಂದು ಸಲ್ಲಿಸಿರುತ್ತೇನೆ. ಸದರಿ ವರದಿಯನ್ನು ನಿಶಾನೆ ಪಿ–5 ಎಂದು ಅದರಲ್ಲಿರುವ ತನ್ನ ಸಹಿಯನ್ನು ನಿ.ಪಿ–5ಎ ಎಂದು ಗುರುತಿಸಿರುತ್ತೇನೆ. ತಕ್ಷೀರಿನಲ್ಲಿ ವಶಪಡಿಸಿಕೊಂಡ ಮದ್ಯದ ಸ್ಯಾಂಪಲುಗಳನ್ನು ರಾಸಾಯನಿಕ ವಿಶ್ಲೇಷಕರು, ಮಂಗಳೂರು ಇವರಿಗೆ ಪೊಲೀಸ್ ನವರೇ ಕಳುಹಿಸಲಾಗಿದ್ದು, ಇವರು ರಾಸಾಯನಿಕ ವಿಶ್ಲೇಷಕರು, ದ.ಕ ಜಿಲ್ಲೆಮಂಗಳೂರು ರವರು ಸಲ್ಲಿಸಿದ ವರದಿ ಸಂ:ಇ–21–13 ದಿ:26–2–2010ರ ವರದಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತೇನೆ.ಸದರಿ ವರದಿಯನ್ನು ನಿ.ಪಿ–6 ಎಂದು ಗುರುತಿಸಲಾಯಿತು. ಸದರಿ ಮದ್ಯಸಾರದ ಸೊತ್ತಿನ ಬಗ್ಗೆ ಯಾರೂ ತಮ್ಮ ಕಚೇರಿಯಲ್ಲಿ ಸ್ವಾಧೀನ ಬಗ್ಗೆ ಅರ್ಜಿ ಸಲ್ಲಿಸದಿರುವುದರಿಂದ ಸದರಿ ಮದ್ಯಸಾರವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಬಗ್ಗೆ ದಿ:3–5–2010 ರಂದು ತನಿಖಾ ವರದಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿದ್ದು, ಸದರಿ ವರದಿಯನ್ನು ನಿ.ಪಿ–7ಎಂದು ಅದರಲ್ಲಿರುವ ತನ್ನ ಸಹಿಯನ್ನು ನಿ.ಪಿ–7 ಎ ಎಂದು ಗುರುತಿಸಲಾಯಿತು. ಈ ಪ್ರಾದಿಕಾರದ ಆದೇಶ ಸಂ:ಎಸ್.ಡಿ.ಕೆ/ 268/ ಡಿಟಿಸಿಆರ್/08–09 ದಿ:25–5–2010ರ ಮುಟ್ಟುಗೋಲು ಆದೇಶದಂತೆ ತಕ್ಷೀರಿನಲ್ಲಿ ವಶಪಡಿಸಿಕೊಂಡ ಮದ್ಯಸಾರವನ್ನು ನಾಶಪಡಿಸಿದ್ದು, ಈ ಬಗ್ಗೆ ವರದಿಯನ್ನು ದಿ:2–6–2010 ರಂದು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತೇನೆ. ಸದರಿ ವರದಿಯನ್ನು ನಿ.ಪಿ–8 ಎಂದು ಅದರಲ್ಲಿರುವ ನನ್ನ ಸಹಿಯನ್ನು ನಿ.ಪಿ–8ಎ ಎಂದು ಗುರುತಿಸಿರುತ್ತೇನೆ. ಪೊಲೀಸ್ ಇಲಾಖೆಯವರು ತಕ್ಷೀರಿಗೆ ಸಂಬಂಧಿಸಿ ಮಾರುತಿ ಆಲ್ಟೊಕಾರುಸಂ:ಕೆಎಲ್–11–ವೈ–9737ರ ಬಿ ಎಕ್ಸ್‌ಟ್ರಾಕ್ಟ್ ವರದಿಯನ್ನು ಸಲ್ಲಿಸಿದ್ದು,ಸದರಿ ವರದಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತೇನೆ.ಸದರಿ ಬಿ ಎಕ್ಸ್‌ಟ್ರಾಕ್ಟ್ ವರದಿಯನ್ನು ನಿ.ಪಿ–9 ಎಂದು ಅದರಲ್ಲಿರುವ ತನ್ನ ಸಹಿಯನ್ನು ನಿ.ಪಿ–9 ಎ ಎಂದು ಗುರುತಿಸಿ ರುತ್ತೇನೆ. ತಕ್ಷೀರಿನಲ್ಲಿ ವಶಪಡಿಸಿಕೊಂಡ ಮಾರುತಿ ಆಲ್ಟೊ ಕಾರಿನ ಬಗ್ಗೆ ವಾಹನದ ಮಾಲೀಕ ರಾಗಲಿ ಅವರ ಪರ ವಕೀಲರಾಗಲಿ ಹಾಗೂ ಓಡಿ ಹೋದ ಆರೋಪಿಯಾಗಲಿ ತನ್ನ ಕಚೇರಿಯಲ್ಲಿ ವಾಹನದ ಬಿಡುಗಡೆ ಬಗ್ಗೆ ಯಾರೂ ಕೂಡ ಅರ್ಜಿ ಸಲ್ಲಿಸಿರುವುದಿಲ್ಲ. ವಾಹನವನ್ನು ವಶಪಡಿಸಿಕೊಂಡು ಈಗಾಗಲೇ 1 ವರ್ಷ 7 ತಿಂಗಳು ಕಳೆದರೂ ವಾಹನದ ಬಿಡುಗಡೆಗಾಗಿ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.ನಿಶಾನೆ ಪಿ–8 ರ ವರದಿಯಂತೆ ತಕ್ಷೀರಿನಲ್ಲಿ ವಶಪಡಿಸಿಕೊಂಡ ಮಾರುತಿ ಅಲ್ಟೊ ಕಾರನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಬಹಿರಂಗ ಹರಾಜಿನಲ್ಲಿ ವಿಲೆವಾರಿಗೊಳಿಸಬೇಕೆಂದು, ನ್ಯಾಯಾಲಯದ ಮುಂದೆ ವಿನಂತಿಸಿಕೊಳ್ಳುತ್ತೇನೆ ಎಂದು ಸಾಕ್ಷಿ ನುಡಿದಿರುತ್ತಾರೆ.

ವಾಹನದ ಮಾಲೀಕರಾಗಲೀ ಮಾಲೀಕರ ಪರ ಪ್ರತಿನಿಧಿಗಳಾಗಲೀ ಪ್ರಾಧಿಕಾರದ ಮುಂದೆ ಹಾಜರಾಗದೇ ಇರುವುದರಿಂದ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಯಿತು.

ಪ್ರಕರಣದ ಫಿರ್ಯಾದುದಾರರು, ಮಹಜರು ಸಾಕ್ಷಿದಾರರು ಹಾಗೂ ತನಿಖಾಧಿಕಾರಿಯವರು ಪೂರಕವಾಗಿ ನೀಡಿರುವ ಸಾಕ್ಷ್ಯಾಧಾರದ ಮೇಲೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ದಿ:17-02-2009 ರಂದು ಜಪ್ತುಪಡಿಸಿಕೊಂಡಿರುವ ಮಾರುತಿ ಆಲ್ಟೊ ಕಾರು ಸಂ:ಕೆಎಲ್–11ವೈ–9737 ರಲ್ಲಿ ಅಕ್ರಮವಾಗಿ 13 ಪ್ಲಾಸ್ಟಿಕ್ ಕ್ಯಾನುಗಳಲ್ಲಿ ತಲಾ 35 ಲೀಟರಿನಂತೆ ಒಟ್ಟು 455–00 ಲೀಟರ್ ಮದ್ಯಸಾರವನ್ನು ಯಾವುದೇ ಅಧಿಕೃತ ರಹದಾರಿ ಪತ್ರವಿಲ್ಲದೆ ಸಾಗಾಣಿಕೆಯಾಗಿರುವುದು ಸಾಬೀತಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ. ವಾಹನ ಮಾಲೀಕರ ಪರ ಹಾಗೂ ಅವರ ಪರ ವಕೀಲರು ಯಾರೂ ಈ ಪ್ರಾಧಿಕಾರದ ಮುಂದೆ ವಾಹನದ ಬಿಡುಗಡೆಗಾಗಿ ವಾಹನಕ್ಕೆ ಸಂಬಂಧಿಸಿ ಯಾವುದೇ ಅರ್ಜಿ ಸಲ್ಲಿಸದೇ ಇರುವ ಕಾರಣಕ್ಕೆ ಎರಡನೇ ಅಂಶವನ್ನು ಗಣನೆಗೆ ತೆಗೆದುಕೊಳ್ಳುವ ಅಗತ್ಯತೆವಿರುವುದಿಲ್ಲ.

1965ನೇ ಕರ್ನಾಟಕ ಅಬಕಾರಿ ಕಾಯಿದೆಯಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಯಿಲ್ಲದಿದ್ದಲ್ಲಿ, ಪ್ರಕರಣವನ್ನು ಪತ್ತೆ ಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಪ್ತಾಗಿರುವ ಸೊತ್ತುಗಳು ತಮ್ಮದೆಂದು, ಅವುಗಳು ಕಾನೂನುಬದ್ದವಾಗಿದೆಯೆಂದು ಸಾಕ್ಷ್ಯಾಧಾರ ದೊಂದಿಗೆ ಸಾಬೀತುಪಡಿಸದೇ ಇದ್ದಲ್ಲಿ, ಸದರಿ ಸೊತ್ತುಗಳು ಕರ್ನಾಟಕ ಅಬಕಾರಿ ಕಾಯಿದೆ ಕಾಲಂ 43ರ ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ, ಅಂತಹ ಸೊತ್ತುಗಳನ್ನು ಕಾಲಂ 43 (ಸಿ)ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳ ಬಹುದಾಗಿರುತ್ತದೆ.

ಸದರಿ ಪ್ರಕರಣದಲ್ಲಿ ಪೊಲೀಸ್ ಉಪ ನಿರೀಕ್ಷಕರು, ಬಂಟ್ವಾಳ ನಗರ ಪೊಲೀಸ ಠಾಣೆ, ಬಂಟ್ವಾಳ ಇವರು ದಾಖಲಿಸಿರುವ ಪ್ರಕರಣದಲ್ಲಿ ಆರೋಪಿಗಳು ಅಕ್ರಮವಾಗಿ ಮದ್ಯಸಾರವನ್ನು ಸಾಗಾಣಿಕೆ ಮಾಡುವಾಗ ವಾಹನವನ್ನು ಪಂಚನಾಮೆಯ ಮುಖಾಂತರ ಸ್ವಾಧೀನಪಡಿಸಿದ್ದು ಹಾಗೂ ವಾಹನದಲ್ಲಿ ಜಪ್ತುಪಡಿಸಲಾಗಿರುವ ವಸ್ತು ರಾಸಾಯನಿಕ ತಜ್ಞರ ಅಭಿಪ್ರಾಯದಂತೆ ಮದ್ಯಸಾರವೆಂದು ಎಂದು ದೃಢಪಟ್ಟಿದ್ದು, ಸದರಿ ವಾಹನವನ್ನು ಕರ್ನಾಟಕ ಅಬಕಾರಿ ಕಾನೂನಿನ ಉಲ್ಲಂಘನೆಗಾಗಿ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುವುದಾಗಿ ಈ ಪ್ರಾಧಿಕಾರವು ತೀರ್ಮಾನ ತೆಗೆದುಕೊಳ್ಳ ಬೇಕಾಗಿರುತ್ತದೆ.

ತಕ್ಷೀರಿನಲ್ಲಿ ವಶಪಡಿಸಿಕೊಂಡ ಮಾರುತಿ ಆಲ್ಟೊ ಕಾರು ಸಂಖ್ಯೆ: ಕೆಎಲ್–11 ವೈ–9737 ನ್ನು ವಶಪಡಿಸಿಕೊಂಡು ಸುಮಾರು 1 ವರ್ಷ 7 ತಿಂಗಳು ಕಳೆದರೂ ಈ ಪ್ರಾಧಿಕಾರದ ಮುಂದೆ ಇದುವರೆಗೂ ವಾಹನದ ಬಿಡುಗಡೆಗಾಗಿ ಅಧಿಕೃತ ದಾಖಲಾತಿಗಳೊಂದಿಗೆ ವಾಹನ ಮಾಲೀಕರ ಪರ ಹಾಗೂ

ಪರಾರಿಯಾದ ಆರೋಪಿಗಳು ಕೂಡಾ ವಾಹನವು ತನ್ನದೆಂದು ಬಿಡುಗಡೆ ಅರ್ಜಿ ಸಲ್ಲಿಸಿರುವುದಿಲ್ಲ.ಈ ಪ್ರಾಧಿಕಾರವು ವಾಹನದ ಮಾಲೀಕರಾದ ದಿ.ಮ್ಯಾನೇಜರ್,ಐಸಿಐಸಿಐ, ಕೊಚ್ಚಿನ್,ಕೇರಳ ಇವರಿಗೆ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43 (ಬಿ)ರನ್ವಯ ಕಾರಣ ಕೇಳಿ ನೋಟೀಸನ್ನು ನೀಡಲಾಗಿದ್ದು, ಸದರಿ ನೋಟೀಸಿಗೆ ನೀಡಿರುವ ಉತ್ತರಕ್ಕೆ ಅನುಗುಣವಾಗಿ ಸದರಿ ವಾಹನವನ್ನು ಶ್ರೀ ಅಹಮದ್ ಖೋಯಾ ಇವರಿಗೆ ಸಂಬಂಧಿಸಿದ್ದಾಗಿದ್ದು ಎಂಬ ಬಗ್ಗೆ ವರದಿಯನ್ನು ದಿ:04–8–2010 ರಂದು ನೀಡಿರುತ್ತಾರೆ. ಆದರೆ ಸದರಿ ವಾಹನದ ಮಾಲೀಕತ್ವದ ಶ್ರೀ ಅಹಮದ್ ಖೋಯಾ ಇವರಿಗೆ ಸಂಬಂಧಿಸಿದ ಬಗ್ಗೆ ಯಾವುದೇ ಅಧಿಕೃತ ದಾಖಲಾತಿಗಳನ್ನು ಸಲ್ಲಿಸಿರುವುದಿಲ್ಲ.ಇದಲ್ಲದೇ ಪ್ರಕರಣವು ದಾಖಲಾಗಿ ಈಗಾಗಲೇ 1 ವರ್ಷ 7 ತಿಂಗಳು ಕಳೆದರೂ ಈ ಪ್ರಾದಿಕಾರದಲ್ಲಿ ವಾಹನದ ಬಿಡುಗಡೆಗಾಗಿ ವಾಹನದ ಮಾಲೀಕರಾಗಲೀ ಹಾಗೂ ಅವರ ಪರ ವಕೀಲರಾಗಲೀ ಮತ್ತು ಓಡಿ ಹೋದ ಆರೋಪಿಯಾಗಲೀ ಅಧಿಕೃತ ದಾಖಲಾತಿಗಳೊಂದಿಗೆ ಅರ್ಜಿ ಸಲ್ಲಿಸಿರುವುದಿಲ್ಲ. ಈ ಬಗ್ಗೆ ಯಾವುದೇ ಪ್ರತಿಕ್ರಿಯೆಯನ್ನು ನೀಡದಿರುವುದರಿಂದ ವಾಹನದ ಬಗ್ಗೆ ಯಾವುದೇ ಉತ್ಸುಕರಾಗಿರುವುದಿಲ್ಲವೆಂದು ಪ್ರಾಧಿಕಾರವು ತೀರ್ಮಾನ ತೆಗೆದುಕೊಳ್ಳಬೇಕಾಗುತ್ತದೆ. ರಾಸಾಯನಿಕ ತಜ್ಞರ ವರದಿಯಂತೆ ಹಾಗೂ ಫಿರ್ಯಾದುದಾರರು ಸಲ್ಲಿಸಿದ ಮಹಜರಿನಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಮದ್ಯಸಾರದ ಸ್ಯಾಂಪಲ್‌ಗಳನ್ನು ರಾಸಾಯನಿಕ ವಿಶ್ಲೇಷಣೆ ತಜ್ಞರಿಗೆ ಕಳುಹಿಸಲಾಗಿದ್ದು,ತಜ್ಞರ ವರದಿಯಂತೆ ಮದ್ಯಸಾರ ಪ್ರಮಾಣ ಶೇ.97 ಇರುವುದಾಗಿ ದೃಢೀಕರಣ ಪತ್ರವನ್ನು ನೀಡಿರುತ್ತಾರೆ. ಆದುದರಿಂದ ಸದ್ರಿ ಮಾರುತಿ ಆಲ್ಟೋ ಕಾರು ಸಂಖ್ಯೆ:ಕೆಎಲ್–11 ವೈ–9737ರಲ್ಲಿ ಅಕ್ರಮವಾಗಿ ಮದ್ಯಸಾರವನ್ನು ಹೊಂದಿ ಕೇರಳ ರಾಜ್ಯಕ್ಕೆ ಸಾಗಾಟ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಸದ್ರಿ ವಾಹನದ ಬಿಡುಗಡೆಗಾಗಿ ಇದುವರೆಗೂ ಆರೋಪಿಯಾಗಲೀ, ವಾಹನದ ಮಾಲೀಕರ ಪರವಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ಪ್ರಾಧಿಕಾರದ ಮುಂದೆ ವಾಹನವನ್ನು ಬಿಡುಗಡೆಗೊಳಿಸಲು ಅರ್ಜಿ ಸಲ್ಲಿಸಿರುವುದಿಲ್ಲ. ವಾಹನದಲ್ಲಿ ಅಕ್ರಮವಾಗಿ ಮದ್ಯಸಾರ ಸಾಗಾಟವಾಗಿರುವುದರಿಂದ ತಕ್ಷೀರಿನಲ್ಲಿ ವಶಪಡಿಸಿಕೊಂಡ ಎಲ್ಲಾ ಸೊತ್ತುಗಳನ್ನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43 ಎ ರಡಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುವುದರಿಂದ, ಈ ಪ್ರಕರಣದಲ್ಲಿ ಅಕ್ರಮ ಸಾಗಾಟಕ್ಕೆ ಬಳಸಿದ ಮಾರುತಿ ಆಲ್ಟೋ ಕಾರು ಸಂಖ್ಯೆ: ಕೆಎಲ್–11 ವೈ–9737 ನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ/268/ಡಿಟಿಸಿಆರ್/2008-09 ದಿ: 20-08-2010**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಾಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, ನಿಯಮ 43(ಬಿ) ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಪೊಲೀಸ್ ಉಪ ನಿರೀಕ್ಷಕರು,ಬಂಟ್ವಾಳ ನಗರ ಪೊಲೀಸ್ ಠಾಣೆ, ಬಂಟ್ವಾಳ ಇವರ ತಕ್ಷೀರು ಸಂ:30/2009 ದಿ:17-02-2009 ರಲ್ಲಿ ಜಪ್ತು ಪಡಿಸಿರುವ ಮಾರುತಿ ಆಲ್ಟೋ ಕಾರು ಸಂಖ್ಯೆ: ಕೆಎಲ್–11 ವೈ–9737 ನ್ನು ನಿಯಮ 43(ಸಿ) ರನ್ವಯ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ:20-08-2010 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ**

ಪ್ರಾ.ಸಾ–1: ಶ್ರೀ ಮಾಧವ ಕೂಡ್ಲು, ಪೂಂಜಲಕಟ್ಟೆ ಔಟ್ ಪೋಸ್ಟ್ , ಬಂಟ್ವಾಳ

ಪ್ರಾ.ಸಾ–2: ಶ್ರೀ ಕುಶಾಲಪ್ಪ,ಪಿ.ಸಿ.–1012, ಬಂಟ್ವಾಳ ನಗರ ಪೊಲೀಸ್ ಠಾಣೆ, ಬಂಟ್ವಾಳ

ಪ್ರಾ.ಸಾ–3 :ಶ್ರೀ ಕಮಲಾಕ್ಷ ಬಲ್ಯಾಯ, ಅಬಕಾರಿ ನಿರೀಕ್ಷಕರು,ಬಂಟ್ವಾಳ ವಲಯ, ಬಂಟ್ವಾಳ

**ಅನುಬಂಧ–2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲಾತಿಗಳು**

ನಿಶಾನೆ ಪಿ–1 : ಮಹಜರು.

ನಿಶಾನೆ ಪಿ–1ಎ : ಮಹಜರಿನಲ್ಲಿ ಫಿರ್ಯಾದುದಾರರ ಸಹಿ

ನಿಶಾನೆ ಪಿ–1ಬಿ: ಮಹಜರಿನಲ್ಲಿ ಪ್ರಾ.ಸಾ–2 ರವರ ಸಹಿ

ನಿಶಾನೆ ಪಿ–2 : ಪ್ರಥಮ ಮಾಹಿತಿ ವರದಿ

ನಿಶಾನೆ ಪಿ–2ಎ : ಪ್ರಥಮ ಮಾಹಿತಿ ವರದಿಯಲ್ಲಿ ಫಿರ್ಯಾದುದಾರರ ಸಹಿ

ನಿಶಾನೆ ಪಿ–3 : ಸೊತ್ತಿನ ಪಟ್ಟಿ

ನಿಶಾನೆಪಿ–3 ಎ: ಸೊತ್ತಿನ ಪಟ್ಟಿಯಲ್ಲಿ ಫಿರ್ಯಾದುದಾರರ ಸಹಿ

ನಿಶಾನೆ ಪಿ–4 : ಈ ಪ್ರಾದಿಕಾರಕ್ಕೆ ದಿ:21–2–2009 ರಂದು ಸಲ್ಲಿಸಿದ ವರದಿ

ನಿಶಾನೆ ಪಿ–4 ಎ : ವರದಿಯಲ್ಲಿ ಫಿರ್ಯಾದುದಾರರ ಸಹಿ

ನಿಶಾನೆ ಪಿ–5 : ಪ್ರಾಸಾ –3 ರವರ ತನಿಖಾ ವರದಿ

ನಿಶಾನೆ ಪಿ–5 ಎ: ಪ್ರಾಸಾ–3 ರವರ ಸಹಿ

ನಿಶಾನೆ ಪಿ–6: ರಾಸಾಯನಿಕ ವಿಶ್ಲೇಷಕರ ವರದಿ

ನಿಶಾನೆ ಪಿ–7: ಪ್ರಾಸಾ –3 ರವರ ತನಿಖಾ ವರದಿ

ನಿಶಾನೆ ಪಿ=7 ಎ: ಪ್ರಾಸಾ–3 ರವರ ಸಹಿ

ನಿಶಾನೆ ಪಿ–8: ಪ್ರಾಸಾ–3 ರವರ ತನಿಖಾ ವರದಿ

ನಿಶಾನೆ ಪಿ–8 ಎ:ಪ್ರಾಸಾ–3 ರವರ ಸಹಿ

ನಿಶಾನೆ ಪಿ–9: ಬಿ ಅಬ್‌ಸ್ಟ್ರ್ಯಾಕ್ಟ್ ವರದಿ.

ನಿಶಾನೆ ಪಿ–9 ಎ: ಪ್ರಾಸಾ–3 ರವರ ಸಹಿ

**ಅನುಬಂಧ–3**

**ವಾಹನ ಮಾಲೀಕರ ಪರ ವಿಚಾರಣೆಗೆ ಯಾರೂ ಹಾಜರಾಗಿರುವುದಿಲ್ಲ.**

**ಅನುಬಂಧ–4**

**ವಾಹನ ಮಾಲೀಕರ ಪರವಾಗಿ ಗುರುತಿಸಲಾದ ಸಾಕ್ಷಿದಾರರು–ಇಲ್ಲ–**

**ನೂರ್ ಮಹಮ್ಮದ್ ಹುಸೇನ್**

ಪಿ.ಆರ್.1388

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಎಸ್‌ಡಿಕೆ/269/ಡಿಟಿಸಿಆರ್/2008-09 ದಿನಾಂಕ: 20-08-2010**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್

ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**

ಪೊಲೀಸ್ ಉಪ ನಿರೀಕ್ಷಕರು,
ಬಂಟ್ವಾಳ ನಗರ ಪೊಲೀಸ್ ಠಾಣೆ,
ಬಂಟ್ವಾಳ.

**ಆರೋಪಿಗಳು:**

ಪರಾರಿಯಾಗಿರುತ್ತಾರೆ.

**ವಾಹನ ಮಾಲೀಕರು:**

Sri Sukumaran V.O, Palakott House, Puthukode Post Office,
Mallampuram,Trichur, Kerala State.

**ಪ್ರಕರಣದ ಮುಖ್ಯಾಂಶಗಳು:**

ದಿ:5–2–2009 ರಂದು ಫಿರ್ಯಾದುದಾರರಿಗೆ ಕಲ್ಲಡ್ಕ ಕಡೆಯಿಂದ ಕೆ.ಸಿ.ರೋಡ್ ಮಾರ್ಗವಾಗಿ ಕೇರಳಕ್ಕೆ ಮಾರುತಿ ಸ್ವಿಫ್ಟ್ ಕಾರಿನಲ್ಲಿ ಅಕ್ರಮವಾಗಿ ಸಾರಾಯಿ ತೊಟ್ಟೆಗಳನ್ನು ಸಾಗಾಟ ಮಾಡುತ್ತಿದ್ದಾರೆ ಎಂಬ ದೊರೆತ ಖಚಿತ ವರ್ತಮಾನದ ಮೇರೆಗೆ ಪಂಚರಾದ ಚೆರಿಯ ಯಾನೆ ಮನ್ಸೂರ್ ಮತ್ತು ಶಿವಪ್ರಸಾದ್ ಇವರುಗಳನ್ನು ಠಾಣೆಗೆ ಬರಮಾಡಿಕೊಂಡು, ತಮ್ಮ ಸಿಬ್ಬಂದಿಯವರಾದ ಎ.ಎಸ್.ಐ ಶಾಂತಪ್ಪ ಗೌಡ, ಪಿ.ಸಿ.ಗಳಾದ ಶೈಲೇಂದ್ರ ಪಿ.ಸಿ.608,ಕುಶಾಲಪ್ಪ ಪಿ.ಸಿ1012, ವಸಂತಗೌಡ ಪಿ.ಸಿ3 54 ಮತ್ತು ಯಜ್ಞ ನಾರಾಯಣ ಎ.ಪಿ.ಸಿ 110, ಹಾಗೂ ಪಂಚರೊಂದಿಗೆ ತಮ್ಮ ಇಲಾಖಾ ಜೀಪಿನಲ್ಲಿ ಠಾಣೆಯಿಂದ ಹೊರಟು, ಬಂಟ್ವಾಳ ತಾಲೂಕು ಅಮ್ಟೂರು ಗ್ರಾಮದ ಕರಿಂಗಾಣ ಬೊಳುವಾಯಿ ಕೂಡು ರಸ್ತೆಯಲ್ಲಿ ಹೊಂಚು ಹಾಕಿ ಕಾಯುತ್ತಿರುವಾಗ ಕೆ.ಸಿ.ರೋಡ್ ಕಡೆಯಿಂದ ಬರುತ್ತಿದ್ದ ಮಾರುತಿ ಸ್ವಿಫ್ಟ್ ಕಾರನ್ನು ಸ್ವಲ್ಪ ದೂರದಲ್ಲಿಯೇ ತಮ್ಮ ಕಡೆಗೆ ಬರುತ್ತಿದ್ದು, ಸಮವಸ್ತ್ರದಲ್ಲಿದ್ದ ತಮ್ಮನ್ನು ಕಂಡು, ಕಾರಿನ ಚಾಲಕ ಕಾರನ್ನು ಸ್ವಲ್ಪ ನಿಧಾನವಾಗಿ ಚಲಾಯಿಸಿ,ಪಕ್ಕನೆ ವಾಪಾಸು ಹಿಂದಕ್ಕೆ ಚಲಾಯಿಸಿ, ಕೆ.ಸಿರೋಡ್ ಕಡೆಗೆ ಚಲಾಯಿಸಿಕೊಂಡು ಹೋದಾಗ ತಾವು ಸದರಿ ಕಾರನ್ನು ಬೆನ್ನಟ್ಟಿಕೊಂಡು ಹೋಗುತ್ತ ಬಂಟ್ವಾಳ ತಾಲೂಕು ಅಮ್ಟೂರು ಗ್ರಾಮದ ಕೆ.ಸಿ.ರೋಡ್ ಕೂಡು ರಸ್ತೆಗೆ ತಲುಪಿದಾಗ ಸದರಿ ಕಾರಿನ ಚಾಲಕನು ವಾಹನದ ವೇಗವನ್ನು ತಗ್ಗಿಸದೇ ಒಮ್ಮೆಲೆ ಬಿ.ಸಿರೋಡ್ ಕಡೆಗೆ ತಿರುಗಿಸಿರುವುದರಿಂದ ವಾಹನದ ಚಾಲನ ಹತೋಟಿ ತಪ್ಪಿ,ರಸ್ತೆಬದಿಯ ಕಲ್ಲಿಗೆ ಡಿಕ್ಕಿ ಹೊಡೆದು, ರಸ್ತೆಯ ಎಡಕ್ಕೆ ಬಿತ್ತು.ಸದರಿ ಚಾಲಕರು ಜೀಪನ್ನು ನಿಲ್ಲಿಸಿ ಇಳಿದು ಹೋಗುವಷ್ಟರಲ್ಲಿ ಕಾರಿನಿಂದ ಇಳಿದು, ರಸ್ತೆಯ ಸ್ವಲ್ಪ ದೂರದಲ್ಲಿಯೆ ಗುಡ್ಡೆಯ ಕಡೆಗೆ ಓಡಿತಪ್ಪಿಸಿಕೊಂಡು ಪರಾರಿಯಾದರು. ಪಂಚರ ಸಮಕ್ಷಮದಲ್ಲಿ ಸದರಿ ಮಾರುತಿ ಸ್ವಿಫ್ಟ್ ಕಾರನ್ನು ಪರಿಶೀಲಿಸಿದಾಗ ಕಾರಿನ ಹಿಂದಿನ ಸೀಟಿನಲ್ಲಿ ಸಾರಾಯಿ ತುಂಬಿದ ತೊಟ್ಟೆಗಳನ್ನು ಪಾಲಿಥಿನ್ ಚೀಲಗಳಲ್ಲಿ ಕಟ್ಟಿ, ಕಾರಿನ ಹಿಂದಿನ ಸೀಟಿನಲ್ಲಿ ಇಟ್ಟಿರುವುದು ಕಂಡು ಬಂತು.ಸದರಿ ಸಾರಾಯಿ ತುಂಬಿದ ತೊಟ್ಟೆಗಳನ್ನು ಹಾಕಿದ ಪಾಲಿಥಿನ್ ಚೀಲವನ್ನು ಹೊರಕ್ಕೆ ತೆಗೆದು ಪರಿಶೀಲಿಸಿದಾಗ 15 ಪಾಲಿಥಿನ್ ಚೀಲದಲ್ಲಿ ಸಾರಾಯಿ ತುಂಬಿದ ತೊಟ್ಟೆಗಳಿದ್ದು, ಪ್ರತಿಯೊಂದು ಸಾರಾಯಿ ತುಂಬಿದ ತೊಟ್ಟೆಗಳ ಮೇಲೆ ಅಬಕಾರಿ ಭದ್ರತಾ ಉಗ್ರಾಣದಲ್ಲಿ ತಯಾರಿಸಲಾಗಿದ್ದು, ದಿ.ಮೈಸೂರು ಶುಗರ್ ಕಂ.ಲಿ.,ಮಂಡ್ಯ ಸಾರಾಯಿಮದ್ಯಪಾನ ಆರೋಗ್ಯಕ್ಕೆ ಹಾನಿಕರ ಮತ್ತು ಕರ್ನಾಟಕ ರಾಜ್ಯದಲ್ಲಿ ಮಾರಾಟಕ್ಕೆ ಮಾತ್ರ , ಕರ್ನಾಟಕ ರಾಜ್ಯದ ಮೊಹರು ಇದ್ದು,ಎಲ್ಲಾ ಸಾರಾಯಿ ತುಂಬಿದ ತೊಟ್ಟೆಗಳ ಮೇಲೆ 100 ಎಂ.ಎಲ್.ಎಂದು ಬರೆದಿರುತ್ತದೆ. ಸಾರಾಯಿ ತೊಟ್ಟೆಗಳ ಮೇಲೆ ಇರುವ ಅಕ್ಷರಗಳು ಎಲ್ಲಾ ಕೆಂಪು ಬಣ್ಣದಲ್ಲಿದೆ. ಸದರಿ 15 ಪಾಲಿಥಿನ್ ಚೀಲಗಳಿರುವ ಸಾರಾಯಿ ತೊಟ್ಟೆಗಳನ್ನು ಪರಿಶೀಲಿಸಿದಾಗ ಒಂದೊಂದು ಚೀಲದಲ್ಲಿ ತಲಾ 400ರಂತೆ ಸಾರಾಯಿ ತುಂಬಿದ ತೊಟ್ಟೆಗಳಿದ್ದು,ಒಟ್ಟು 15 ಪಾಲಿಥಿನ್ ಚೀಲಗಳಲ್ಲಿ 100 ಎಂ.ಎಲ್.ನ 6000 ಸಾರಾಯಿ ತೊಟ್ಟೆಗಳಿರುವುದು ಕಂಡು ಬಂತು. ಪ್ರತಿಯೊಂದು ಸಾರಾಯಿ ತುಂಬಿದ ಪಾಲಿಥಿನ್ ಚೀಲದಿಂದ ತಲಾ ಎರಡೆರಡರಂತೆ ಸಾರಾಯಿ ತುಂಬಿದ ತೊಟ್ಟೆಗಳನ್ನು ತೆಗೆದು, ಅವುಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಬಿಳಿಬಟ್ಟೆಗಳಿಂದ ಪ್ಯಾಕ್ ಮಾಡಿ, ಅರಗು ಹಾಕಿ, ಎಸ್.ಹೆಚ್.ಓ ಸೀಲು ಮಾಡಿ, ಸಾರಾಯಿ ತುಂಬಿದ ಪಾಲಿತಿನ್ ಚೀಲಕ್ಕೆ ಎ ರಿಂದ

ಒ ತನಕ ಮತ್ತು ಮಾದರಿಗೆ ತೆಗೆದ ಸಾರಾಯಿ ತುಂಬಿದ ತೊಟ್ಟೆಗಳಿಗೆ ಎ 1 ರಿಂದ ಒ 1 ಎಂದು ಕೆಂಪು ಬಣ್ಣದಲ್ಲಿ ಗುರುತು ಮಾಡಿರುತ್ತಾರೆ. ಸದರಿ ಸ್ವಿಫ್ಟ್ ಕಾರನ್ನು ಪರಿಶೀಲಿಸಿದಾಗ ಅದರ ನೊಂದಣಿ ಸಂ:ಕೆಎ–09–ಎಂ–9581 ಆಗಿದ್ದು, ಇದರ ಬಣ್ಣ ಸ್ಟೀಲ್ ಗ್ರೇ ಆಗಿರುತ್ತದೆ. ಕಾರಿನ ಒಳಗಡೆ ನಂಬರ್ ಪ್ಲೇಟುಗಳು ದೊರೆತಿದ್ದು,ಅದನ್ನು ತೆಗೆದು ನೋಡಲಾಗಿ ಕೆ.ಎಲ್–10–ಜೆಡ್–1057 ನಂಬರ್ ಆಗಿರುತ್ತದೆ. ಕಾರಿನ ಎದುರಿನ ಭಾಗ ಜಖಂ ಗೊಂಡಿರುತ್ತದೆ. ಇದು ಅಕ್ರಮ ಸಾರಾಯಿ ಸ್ಯಾಚೆಟ್ ಸಾಗಾಟವಾಗಿರುವುದರಿಂದ ಸಾರಾಯಿ ತೊಟ್ಟೆಗಳನ್ನು ಮತ್ತು ಮಾರುತಿ ಸ್ವಿಫ್ಟ್ ಕಾರನ್ನು ವಶಕ್ಕೆ ತೆಗೆದುಕೊಂಡು ಸ್ಥಳದಲ್ಲೇ ಈ ಬಗ್ಗೆ ಮಹಜರನ್ನು ತಯಾರಿಸಿರುತ್ತಾರೆ..ಮಹಜರಿನಲ್ಲಿ ಕಾರಿನ ಇಂಜಿನ್ ನಂಬರ್ ಮತ್ತು ಚಾಸಿಸ್ ನಂಬರುಗಳನ್ನು ನಮೂದಿಸಿ, ಇದು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 32, 34 ರ ಪ್ರಕಾರ ಅಪರಾಧ ಹಾಗೂ ಶಿಕ್ಷಾರ್ಹವಾಗಿರುವುದರಿಂದ ಓಡಿ ಹೋದ ಆರೋಪಿಗಳ ವಿರುದ್ಧ ತಕ್ಷೀರು ಸಂ:25/2009 ದಿ:05–02–2009 ರಂತೆ ಪ್ರಕರಣವನ್ನು ದಾಖಲಿಸಿ ಕೊಂಡು, ವರದಿಯನ್ನು ಮಾನ್ಯ ನ್ಯಾಯಾಲಯಕ್ಕೆ ಹಾಗೂ ಮೇಲಾಧಿಕಾರಿಗಳಿಗೆ ಮತ್ತು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಪೊಲೀಸ್ ಉಪ ನಿರೀಕ್ಷಕರು, ಬಂಟ್ವಾಳ ನಗರ ಪೊಲೀಸ್ ಠಾಣೆ,ಬಂಟ್ವಾಳ ಇವರ ವರದಿ ಸಂಖ್ಯೆ ದಿ:21–02–2009 ರ ವರದಿಯಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಸೊತ್ತು ಗಳನ್ನು ಅಬಕಾರಿ ನಿರೀಕ್ಷಕರು,ಬಂಟ್ವಾಳ ವಲಯ,ಬಂಟ್ವಾಳ ಇವರಿಗೆ ಹಸ್ತಾಂತರಿಸಲು ಅನುಮತಿ ಆದೇಶ ಕೋರಿರುವ ಮೇರೆಗೆ ಈ ಪ್ರಾಧಿಕಾರದ ಆದೇಶ ಸಂ:ಎಸ್.ಡಿಕೆ/269/ ಡಿಟಿಸಿಆರ್/ 08–09 ದಿ:13 –3 –2009 ರ ಆದೇಶದಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಮಾರುತಿ ಸ್ವಿಫ್ಟ್ ಕಾರು ಹಾಗೂ ಸಾರಾಯಿ ಸ್ಯಾಚೆಟ್‌ಗಳನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43 (ಎ) ರಡಿಯಲ್ಲಿ ಮುಟ್ಟುಗೋಲು ಪ್ರಕ್ರಿಯೆ ನಡೆಸುವ ಬಗ್ಗೆ ಈ ಪ್ರಾದಿಕಾರದ ಪರ ಭದ್ರತಾ ದಾಸ್ತಾನು ಇರಿಸಿಕೊಳ್ಳಲು ಅಬಕಾರಿ ನಿರೀಕ್ಷಕರು,ಬಂಟ್ವಾಳ ವಲಯ ಇವರಿಗೆ ಅನುಮತಿ ಆದೇಶ ನೀಡಿದ್ದು, ಹಾಗೂ ಪ್ರಕರಣದ ತನಿಖೆಯನ್ನು ಪೊಲೀಸ್ ಉಪ ನಿರೀಕ್ಷಕರು, ಬಂಟ್ವಾಳ ನಗರ ಪೊಲೀಸ್ ಠಾಣೆ, ಬಂಟ್ವಾಳ ಇವರು ಮುಂದುವರಿಸಿ, ಪ್ರಕರಣದ ಅಂತಿಮ ದೋಷಾರೋಪಣ ಪಟ್ಟಿಯನ್ನು ಘನ ನ್ಯಾಯಾಲಯದಲ್ಲಿ ಸಲ್ಲಿಸಲು ಅನುಮತಿ ನೀಡಿದೆ.

ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ, ಬಂಟ್ವಾಳ ಇವರ ತನಿಖಾ ವರದಿ ಸಂಖ್ಯೆ: ಸಿಆರ್‌ಎಂ/11/2009–10 ದಿ:20–03–2010ರ ವರದಿಯಲ್ಲಿ ವಶಪಡಿಸಿಕೊಂಡ ಸೊತ್ತುಗಳನ್ನು ಈ ಪ್ರಾಧಿಕಾರದ ಆದೇಶಾನುಸಾರ ದಿ:08–03 –2010 ರಂದು ಹಸ್ತಾಂತರಿಸಿರುತ್ತಾರೆಂದು ಹಾಗೂ ಇವರ ವರದಿ ಸಂಖ್ಯೆ ದಿ:03–5–2010 ರ ವರದಿಯಲ್ಲಿ ತಕ್ಷೀರಿನಲ್ಲಿ ತೆಗೆದ ಸಾರಾಯಿ ಸ್ಯಾಚೆಟ್‌ಗಳ ಸ್ಯಾಂಪಲ್‌ಗಳನ್ನು ಸಹಾಯಕ ಪೊಲೀಸ್ ಅಧೀಕ್ಷಕರು,ಪುತ್ತೂರು ಉಪ ವಿಭಾಗ, ಪುತ್ತೂರು ಇವರು ರಾಸಾಯನಿಕ ಪರೀಕ್ಷೆಗಾಗಿ ಕಳುಹಿಸಲಾಗಿದ್ದು, ರಾಸಾಯನಿಕ ವಿಶ್ಲೇಷಕರು, ಮಂಗಳೂರು ಇವರ ವರದಿ ಸಂಖ್ಯೆ:ಇ–20–30 ದಿ:26–02–2010ರ ವರದಿಯಲ್ಲಿ ಸಾರಾಯಿಯ ಮದ್ಯಸಾರ ಪ್ರಮಾಣ ಶೇ.22 ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ. ಹಾಗೂ ತಕ್ಷೀರಿನಲ್ಲಿ ವಶಪಡಿಸಿಕೊಂಡ ಮಾರುತಿ ಸ್ವಿಫ್ಟ್ ಕಾರು ಸಂಖ್ಯೆ: ಕೆಎ–09–ಎಂ–9581ರ ಮಾಲೀಕತ್ವದ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳನ್ನು ಸಂಪರ್ಕಿಸಲಾಗಿದ್ದು, ಅವರಿಂದ ಯಾವುದೇ ಬಿ ಅಬ್‌ಸ್ಟ್ರಾಕ್ಟ್ ವರದಿಗಳು ಬಂದಿರುವುದಿಲ್ಲ. ಹಾಗೂ ವಾಹನದ ಮಾಲೀಕತ್ವ ಬಗ್ಗೆ ಯಾರೂ ಕೂಡ ಕಚೇರಿಯನ್ನು ಸಂಪರ್ಕಿಸಿ,ವಾಹನದ ಬಿಡುಗಡೆಗಾಗಿ ವಾಹನದ ಮಾಲೀಕರಾಗಲೀ ,ಅವರ ಪರ ವಕೀಲರಾಗಲೀ ಹಾಗೂ ಓಡಿ ಹೋದ ಆರೋಪಿಯಾಗಲೀ, ಹಾಜರಾಗಿ ಯಾವುದೇ ಅಧಿಕೃತ ದಾಖಲಾತಿಗಳೊಂದಿಗೆ ವಾಹನದ ಬಿಡುಗಡೆಗಾಗಿ ಯಾರೂ ಕೂಡ ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ಆದುದರಿಂದ ತಕ್ಷೀರಿನಲ್ಲಿ ವಶಪಡಿಸಿಕೊಂಡ ಸಾರಾಯಿ ಸ್ಯಾಚೆಟ್‌ಗಳನ್ನು ಹಾಗೂ ಸಾಗಾಟಕ್ಕೆ ಬಳಸಿದ ಮಾರುತಿ ಸ್ವಿಫ್ಟ್ ಕಾರನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಸಾರಾಯಿ ಸ್ಯಾಚೆಟ್‌ಗಳನ್ನು ನಾಶಪಡಿಸಲು ಹಾಗೂ ವಾಹನವನ್ನು ಬಹಿರಂಗ ಹರಾಜಿನಲ್ಲಿ ವಿಲೇವಾರಿಗೊಳಿಸಬೇಕೆಂದು ಶಿಫಾರಸ್ಸು ಮಾಡಿರುತ್ತಾರೆ.

ಅಬಕಾರಿ ನಿರೀಕ್ಷಕರ ತನಿಖಾ ವರದಿಯನ್ನು ಆಧರಿಸಿ, ಈ ಪ್ರಾಧಿಕಾರದ ಆದೇಶ ಸಂ:ಎಸ್.ಡಿಕೆ/269/ಡಿಟಿಸಿಆರ್/08–09 ದಿ:24–5–2010ರ ಆದೇಶದಲ್ಲಿ ತಕ್ಷೀರಿನಲ್ಲಿ ಜಪ್ತು ಪಡಿಸಲಾಗಿರುವ ಸೊತ್ತುಗಳ ಪೈಕಿ ಮಾರುತಿ ಸ್ವಿಫ್ಟ್ ಕಾರಿನ ಮುಟ್ಟುಗೋಲು ಪ್ರಕ್ರಿಯೆಯನ್ನು ಕಾಯ್ದಿರಿಸಿ,ಉಳಿದ 100 ಎಂ.ಎಲ್.ನ 6000 ಸಾರಾಯಿ ಸ್ಯಾಚೆಟ್‌ಗಳಲ್ಲಿ ರಾಸಾಯನಿಕ ವಿಶ್ಲೇಷಣೆಗೆ ತೆಗೆದ ಮಾದರಿಗಳನ್ನು ಹೊರತುಪಡಿಸಿ,ಉಳಿದ 100 ಎಂ.ಎಲ್.ನ 5970 ಸಾರಾಯಿ ಸ್ಯಾಚೆಟ್‌ಗಳನ್ನು ಕರ್ನಾಟಕ ಅಬಕಾರಿ ಕಾಯಿದೆ 1965 ಕಲಂ 43 (ಸಿ)ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಮಹಜರು ಜರುಗಿಸಿ,ನಿಯಮಾನುಸಾರ ನಾಶಪಡಿಸಲು ಆದೇಶಿಸಲಾಗಿದೆ.ಸದರಿ ಆದೇಶದಂತೆ ಅಬಕಾರಿ ಉಪ ಅಧೀಕ್ಷಕರು,ಬಂಟ್ವಾಳ ಉಪವಿಭಾಗ,ಬಂಟ್ವಾಳ ಇವರ ವರದಿ ಸಂ:35/2009–10 ದಿ:12–6–2010 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ 100 ಎಂ.ಎಲ್ ನ 5970 ಸಾರಾಯಿ ಸ್ಯಾಚೆಟ್‌ಗಳನ್ನು ಮಹಜರು ಜರುಗಿಸಿ, ನಾಶಪಡಿಸಿ ವರದಿ ಸಲ್ಲಿಸಿರುತ್ತಾರೆ.

ಅಬಕಾರಿ ನಿರೀಕ್ಷಕರು,ಬಂಟ್ವಾಳ ವಲಯ,ಬಂಟ್ವಾಳ ಇವರ ವರದಿ ಸಂ: ಆರ್.ಸಿ.ಆರ್./ 11/09–10 ದಿ:2–6–2010 ರ ವರದಿಯಲ್ಲಿ ಜಪ್ತಾದ ಮಾರುತಿ ಸ್ವಿಫ್ಟ್ ಕಾರಿನ ಬಿ ಅಬ್‌ಸ್ಟ್ರಾಕ್ಟ್ ವರದಿಯನ್ನು ಪೊಲೀಸ್ ಇಲಾಖೆಯವರು ಈ ಕಚೇರಿಗೆ ಒಪ್ಪಿಸಿದ್ದು, ಸದರಿ ವಾಹನದ ನೊಂದಣಿ ಮಾಲೀಕ Sri Sukumaran V.O, Palakott House,Puthukode Post Office,Mallampuram,Trichur,Kerala State ಮತ್ತು ಹೆಚ್.ಪಿ.ಎದಾರರಾದ Sri Ram Transport Finance Co.Ltd,Mukambika Complex,3 rd Floor,Lady Desika Road,Mylapore ,Chennai ಎಂಬುದಾಗಿ ಬಿ.ಅಬ್‌ಸ್ಟ್ರಾಕ್ಟ್ ವರದಿಯಲ್ಲಿ ದೃಢೀಕರಿಸಿ ನೀಡಿರುತ್ತಾರೆ. ಸದರಿ ಬಿ ಅಬ್‌ಸ್ಟ್ರಾಕ್ಟ್ ವರದಿಯ ಅನುಸಾರ ವಾಹನದ ನೊಂದಣಿ ಮಾಲೀಕರಾದ ದಿ.ಮ್ಯಾನೇಜರ್ ಇವರಿಗೆ ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯಿದೆ 43 (ಬಿ)ಪ್ರಕಾರ ಕಾರಣ ಕೇಳಿ ನೋಟೀಸಗಳನ್ನು ದಿ:09–06–2010 ರಂದು ನೊಂದಣಿ ಅಂಚೆ ಮೂಲಕ ನೀಡಲಾಗಿದ್ದು,ಸದರಿ ಕಾರಣ ಕೇಳಿ ನೋಟೀಸುಗಳು ಸ್ವೀಕೃತಿಯಾಗಿ ಸ್ವೀಕೃತಿ ರಶೀದಿ ಬಂದಿದ್ದು, ಈ ಬಗ್ಗೆ ಹೆಚ್.ಪಿ.ಎದಾರರಾದ ಶ್ರೀ ರಾಮ್ ಟ್ರಾನ್ಸ್ ಪೋರ್ಟ್ ಫೈನಾನ್ಸನ ಮೇಲ್ವಿಚಾರಕರಾದ ಶ್ರೀ ಮಿಥುನ್ ಇವರು ದಿ:9–7–2010 ರಂದು ಈ ಪ್ರಾದಿಕಾರವು ನೀಡಿದ ಕಾರಣ ಕೇಳಿ ನೋಟೀಸಿಗೆ ಉತ್ತರವನ್ನು ಸಲ್ಲಿಸುತ್ತಾ, ಸದರಿ ಕಾರಣ ಕೇಳಿ ನೋಟೀಸಿನಲ್ಲಿ ತಕ್ಷೀರಿಗೆ ಸಂಬಂದಿಸಿದ ವಾಹನದ ನೊಂದಣಿ ಬಗ್ಗೆ ನಕಲಿ ನಂಬರ್ ಕೆಎ–09–ಎಂ–9581 ಹಾಗೂ ಸಂಖ್ಯೆ: ಕೆಎಲ್–10–ಜೆಡ್–9581 ರ ಬಗ್ಗೆ ನೋಟೀಸು ನೀಡಲಾಗಿದ್ದರೂ ಈ ಬಗ್ಗೆ ತಮಗೆ 2 ವಾರಗಳ ಕಾಲಾವಕಾಶ ನೀಡಬೇಕೆಂದು

ತಮ್ಮ ಅರ್ಜಿಯಲ್ಲಿ ಕೋರಿರುತ್ತಾರೆ. ಆದರೆ ಇದುವರೆಗೂ ಯಾವುದೇ ಅಧಿಕೃತ ದಾಖಲಾತಿಗಳೊಂದಿಗೆ ಈ ಪ್ರಾಧಿಕಾರದ ಮುಂದೆ ವಾಹನದ ಬಿಡುಗಡೆಗಾಗಿ ಅರ್ಜಿ ಸಲ್ಲಿಸಿರುವುದಿಲ್ಲ.ವಾಹನದ ನೊಂದಣಿ ಮಾಲೀಕರಾದ Sri Sukumaran V.O, PalakottHouse, Puthukode PostOffice, Mallampuram, Trichur, Kerala State ಇವರಿಗೆ ನೀಡಿದ ಕಾರಣ ಕೇಳಿ ನೋಟೀಸು ಸ್ವೀಕೃತಿಯಾಗದೇ ಈ ಕಚೇರಿಗೆ ಹಿಂದೆ ಬಂದಿರುತ್ತದೆ. ಆದರೆ ವಾಹನದ ಮಾಲೀಕರಾಗಲೀ ಅವರ ಪರವಕೀಲರಾಗಲೀ ಹಾಗೂ ಓಡಿ ಹೋದ ಆರೋಪಿಯಾಗಲೀ ಈ ಪ್ರಾದಿಕಾರದ ಮುಂದೆ ಅಧಿಕೃತ ದಾಖಲಾತಿಗಳೊಂದಿಗೆ ಯಾರೂ ಕೂಡ ಅರ್ಜಿ ಸಲ್ಲಿಸಿರುವುದಿಲ್ಲ.

ನಂತರ ಪ್ರಕರಣದ ವಿಚಾರಣೆಯನ್ನು ಆರಂಭಿಸಿ, ಈ ಪ್ರಕರಣದಲ್ಲಿ ಈ ಕೆಳಗಿನಂತೆ ವಿವಾದಾಂಶಗಳು ಉದ್ಭವಿಸುತ್ತದೆ.

1) ಮೊದಲನೇ ವಿವಾದಾಂಶ: ದಿ: 05-02-2009 ರಂದು ಮಾರುತಿ ಸ್ವಿಫ್ಟ್ ಕಾರು ಸಂ:ಕೆಎಲ್–10–ಜಡ್ಡ್–1057 (ನಕಲಿ ಸಂಖ್ಯೆ: ಕೆಎ–09 ಎ–9581) ರಲ್ಲಿ ವಾಹನದ ಮಾಲೀಕರ ತಿಳುವಳಿಕೆ ಯಿಂದಲೇ ಅಕ್ರಮವಾಗಿ ಸಾರಾಯಿ ಸ್ಯಾಚೆಟ್‌ಗಳನ್ನು ಸಾಗಾಣಿಕೆಯಾಗಿದೆಯೇ? ಮತ್ತು ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ ಮತ್ತು ನಿಯಮಗಳ ರೀತ್ಯಾ ಉಲ್ಲಂಘನೆಗೆ ಬಳಸಲಾಗಿದೆಯೇ?

2) ಎರಡನೇ ವಿವಾದಾಂಶ: ಸದರಿ ವಾಹನದಲ್ಲಿ ಅಕ್ರಮವಾಗಿ ಸಾರಾಯಿ ಸ್ಯಾಚೆಟ್‌ಗಳು ಸಾಗಾಣಿಕೆಯಾಗಿರುವುದರ ಬಗ್ಗೆ ವಾಹನ ಮಾಲೀಕರಿಗೆ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೆ ನಡೆದಿದೆ ಹಾಗೂ ಇದರ ಬಗ್ಗೆ ಅವರು ಸಾಕಷ್ಟು ಮುಂಜಾಗ್ರತ ಕ್ರಮವನ್ನು ಕೈಗೊಳ್ಳಲಾಗಿತ್ತು ಎಂಬ ಅಂಶವನ್ನು ಆರೋಪಿಗಳು ಮತ್ತು ವಾಹನ ಮಾಲೀಕರು ಈ ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲವೇ?

3 ) ಮೂರನೇ ವಿವಾದಾಂಶ: ಜಪ್ತುಪಡಿಸಲಾದ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ಅಥವಾ ಇಲ್ಲವೇ?

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ: 1**

ಶ್ರೀ ಮಾಧವ ಕೂಡ್ಲು, ಪೂಂಜಲಕಟ್ಟೆ ಔಟ್ ಪೋಸ್ಟ್, ಬಂಟ್ವಾಳ ಇವರು ಪ್ರಕರಣದ ಫಿರ್ಯಾದುದಾರರಾಗಿದ್ದು, ಇವರು ದಿ:17–08–2010 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಎಡಿಪಿಯವರ ಮುಖ್ಯ ವಿಚಾರಣೆಗೆ ಉತ್ತರವನ್ನು ನೀಡುತ್ತಾ, ತಾನು ಬಂಟ್ವಾಳ ನಗರ ಪೋಲೀಸ್ ಠಾಣೆಯಲ್ಲಿ ಪೋಲೀಸ್ ಉಪ ನಿರೀಕ್ಷಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ತನಗೆ ದಿ:5–2–2009 ರಂದು ಕಲ್ಲಡ್ಕ ಕಡೆಯಿಂದ ಕೆ.ಸಿ.ರೋಡ್ ಮಾರ್ಗವಾಗಿ ಕೇರಳಕ್ಕೆ ಮಾರುತಿ ಸ್ವಿಫ್ಟ್ ಕಾರಿನಲ್ಲಿ ಅಕ್ರಮವಾಗಿ ಸಾರಾಯಿ ತೊಟ್ಟೆಗಳನ್ನು ಸಾಗಾಟ ಮಾಡುತ್ತಿದ್ದಾರೆ ಎಂಬ ದೊರೆತ ಖಚಿತ ವರ್ತಮಾನದ ಮೇರೆಗೆ ಪಂಚರಾದ ಚೆರಿಯ ಯಾನೆ ಮನ್ಸೂರ್ ಮತ್ತು ಶಿವಪ್ರಸಾದ್ ಇವರುಗಳನ್ನು ಠಾಣೆಗೆ ಬರಮಾಡಿಕೊಂಡು, ತಮ್ಮ ಸಿಬ್ಬಂದಿಯವರಾದ ಎ.ಎಸ್.ಐ ಶಾಂತಪ್ಪ ಗೌಡ, ಪಿ.ಸಿ. ಗಳಾದ ಶೈಲೇಂದ್ರ ಪಿ.ಸಿ.608, ಕುಶಾಲಪ್ಪ ಪಿ.ಸಿ1012, ವಸಂತಗೌಡ ಪಿ.ಸಿ354 ಮತ್ತು ಯಜ್ಞ ನಾರಾಯಣ ಎ.ಪಿ.ಸಿ 110, ಹಾಗೂ ಪಂಚರೊಂದಿಗೆ ತಮ್ಮ ಇಲಾಖಾ ಜೀಪಿನಲ್ಲಿ ಠಾಣೆಯಿಂದ ಹೊರಟು, ಬಂಟ್ವಾಳ ತಾಲೂಕು ಅಮ್ಮೂರು ಗ್ರಾಮದ ಕರಿಂಗಾಣ ಬೊಳುವಾಯಿ ಕೂಡು ರಸ್ತೆಯಲ್ಲಿ ಹೊಂಚು ಹಾಕಿ ಕಾಯುತ್ತಿರುವಾಗ ಕೆ.ಸಿ.ರೋಡ್ ಕಡೆಯಿಂದ ಬರುತ್ತಿದ್ದ ಮಾರುತಿ ಸ್ವಿಫ್ಟ್ ಕಾರನ್ನು ಸ್ವಲ್ಪ ದೂರದಲ್ಲಿಯೇ ತಮ್ಮ ಕಡೆಗೆ ಬರುತ್ತಿದ್ದು, ಸಮವಸ್ತ್ರದಲ್ಲಿದ್ದ ತಮ್ಮನ್ನು ಕಂಡು, ಕಾರಿನ ಚಾಲಕ ಕಾರನ್ನು ಸ್ವಲ್ಪ ನಿಧಾನವಾಗಿ ಚಲಾಯಿಸಿ,ಪಕ್ಕನೆ ವಾಪಾಸು ಹಿಂದಕ್ಕೆ ಚಲಾಯಿಸಿ, ಕೆ.ಸಿರೋಡ್ ಕಡೆಗೆ ಚಲಾಯಿಸಿಕೊಂಡು ಹೋದಾಗ ತಾವು ಸದರಿ ಕಾರನ್ನು ಬೆನ್ನಟ್ಟಿಕೊಂಡು ಹೋಗುತ್ತ ಬಂಟ್ವಾಳ ತಾಲೂಕು ಅಮ್ಮೂರು ಗ್ರಾಮದ ಕೆ.ಸಿ.ರೋಡ್ ಕೂಡು ರಸ್ತೆಗೆ ತಲುಪಿದಾಗ ಸದರಿ ಕಾರಿನ ಚಾಲಕನುವಾಹನದ ವೇಗವನ್ನು ತಗ್ಗಿಸದೇ ಒಮ್ಮೆಲೆ ಬಿ.ಸಿರೋಡ್ ಕಡೆಗೆ ತಿರುಗಿಸಿರುವುದರಿಂದ ವಾಹನದ ಚಾಲನ ಹತೋಟಿ ತಪ್ಪಿ,ರಸ್ತೆಬದಿಯ ಕಲ್ಲಿಗೆ ಡಿಕ್ಕಿ ಹೊಡೆದು, ರಸ್ತೆಯ ಎಡಕ್ಕೆ ಬಿತ್ತು.ಸದರಿ ಚಾಲಕರು ತಾವು ಜೀಪನ್ನು ನಿಲ್ಲಿಸಿ ಇಳಿದು ಹೋಗುವಷ್ಟರಲ್ಲಿ ಕಾರಿನಿಂದ ಇಳಿದು,ರಸ್ತೆಯ ಸ್ವಲ್ಪದೂರದಲ್ಲಿಯೆ ಗುಡ್ಡೆಯ ಕಡೆಗೆ ಓಡಿತಪ್ಪಿಸಿಕೊಂಡು ಪರಾರಿಯಾದರು. ಪಂಚರಾದ ತಾವು ಇದ್ದಲ್ಲಿಗೆ ಪೋಲೀಸ್ ಅಧಿಕಾರಿ ಮತ್ತು ಸಿಬ್ಬಂದಿಯವರು ಕೂಡ ಬಂದರು.ಪಂಚರ ಸಮಕ್ಷಮದಲ್ಲಿ ಸದರಿ ಮಾರುತಿ ಸ್ವಿಫ್ಟ್ ಕಾರನ್ನು ಪರಿಶೀಲಿಸಿದಾಗ ಮಾರುತಿ ಕಾರಿನ ಹಿಂದಿನ ಸೀಟಿನಲ್ಲಿ ಸಾರಾಯಿ ತುಂಬಿದ ತೊಟ್ಟೆಗಳನ್ನು ಪಾಲಿಥಿನ್ ಚೀಲಗಳಲ್ಲಿ ಕಟ್ಟಿ, ಕಾರಿನ ಹಿಂದಿನ ಸೀಟಿನಲ್ಲಿ ಇಟ್ಟಿರುವುದು ಕಂಡು ಬಂತು.ಸದರಿ ಸಾರಾಯಿ ತುಂಬಿದ ತೊಟ್ಟೆಗಳನ್ನು ಹಾಕಿದ ಪಾಲಿಥಿನ್ ಚೀಲವನ್ನು ಹೊರಕ್ಕೆ ತೆಗೆದು ಪರಿಶೀಲಿಸಿದಾಗ 15 ಪಾಲಿಥಿನ್ ಚೀಲದಲ್ಲಿ ಸಾರಾಯಿ ತುಂಬಿದ ತೊಟ್ಟೆಗಳಿದ್ದು, ಪ್ರತಿಯೊಂದು ಸಾರಾಯಿ ತುಂಬಿದ ತೊಟ್ಟೆಗಳ ಮೇಲೆ ಅಬಕಾರಿ ಭದ್ರತಾ ಉಗ್ರಾಣದಲ್ಲಿ ತಯಾರಿಸಲಾಗಿದ್ದು, ದಿ.ಮೈಸೂರು ಶುಗರ್ ಕಂ.ಲಿ.,ಮಂಡ್ಯ ಸಾರಾಯಿ ಮದ್ಯಪಾನ ಆರೋಗ್ಯಕ್ಕೆ ಹಾನಿಕರ ಮತ್ತು ಕರ್ನಾಟಕ ರಾಜ್ಯದಲ್ಲಿ ಮಾರಾಟಕ್ಕೆ ಮಾತ್ರ, ಕರ್ನಾಟಕ ರಾಜ್ಯದ ಮೊಹರು ಇದ್ದು,ಎಲ್ಲಾ ಸಾರಾಯಿ ತುಂಬಿದ ತೊಟ್ಟೆಗಳ ಮೇಲೆ 100 ಎಂ.ಎಲ್.ಎಂದು ಬರೆದಿರುತ್ತದೆ. ಸಾರಾಯಿ ತೊಟ್ಟೆಗಳ ಮೇಲೆ ಇರುವ ಅಕ್ಷರಗಳು ಎಲ್ಲಾ ಕೆಂಪು ಬಣ್ಣದಲ್ಲಿದೆ. ಸದರಿ 15 ಪಾಲಿಥಿನ್ ಚೀಲಗಳಿರುವ ಸಾರಾಯಿ ತೊಟ್ಟೆಗಳನ್ನು ಪರಿಶೀಲಿಸಿದಾಗ ಒಂದೊಂದು ಚೀಲದಲ್ಲಿ ತಲಾ 400ರಂತೆ ಸಾರಾಯಿ ತುಂಬಿದ ತೊಟ್ಟೆಗಳಿದ್ದು, ಒಟ್ಟು 15 ಪಾಲಿಥಿನ್ ಚೀಲಗಳಲ್ಲಿ 100 ಎಂ.ಎಲ್.ನ 6000 ಸಾರಾಯಿ ತೊಟ್ಟೆಗಳಿರುವುದು ಕಂಡು ಬಂತು. ಪ್ರತಿಯೊಂದು ಸಾರಾಯಿ ತುಂಬಿದ ಪಾಲಿಥಿನ್ ಚೀಲದಿಂದ ತಲಾ ಎರಡೆರಡರಂತೆ ಸಾರಾಯಿ ತುಂಬಿದ ತೊಟ್ಟೆಗಳನ್ನು ತೆಗೆದು, ಅವುಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಬಿಳಿಬಟ್ಟೆಗಳಿಂದ ಪ್ಯಾಕ್ ಮಾಡಿ, ಅರಗು ಹಾಕಿ, ಎಸ್.ಹೆಚ್.ಓ ಸೀಲು ಮಾಡಿ, ಸಾರಾಯಿ ತುಂಬಿದ ಪಾಲಿತಿನ್ ಚೀಲಕ್ಕೆ ಎ ರಿಂದ ಒ ತನಕ ಮತ್ತು ಮಾದರಿಗೆ ತೆಗೆದ ಸಾರಾಯಿ ತುಂಬಿದ ತೊಟ್ಟೆಗಳಿಗೆ ಎ 1 ರಿಂದ ಒ 1 ಎಂದು ಕೆಂಪು ಬಣ್ಣದಲ್ಲಿ ಗುರುತು ಮಾಡಲಾಯಿತು. ಸದರಿ ಸ್ವಿಫ್ಟ್ ಕಾರನ್ನು ಪರಿಶೀಲಿಸಿದಾಗ ಅದರ ನೊಂದಣಿ ಸಂ:ಕೆಎ–09–ಎಂ–9581 ಆಗಿದ್ದು, ಇದರ ಬಣ್ಣ ಸ್ಟೀಲ್ ಗ್ರೇ ಆಗಿರುತ್ತದೆ. ಕಾರಿನ ಒಳಗಡೆ ನಂಬರ್ ಪ್ಲೇಟುಗಳು ದೊರೆತಿದ್ದು, ಅದನ್ನು ತೆಗೆದು ನೋಡಲಾಗಿ ಕೆ.ಎಲ್–10 ಜೆಡ್–1057 ಆಗಿರುತ್ತದೆ. ಕಾರಿನ ಎದುರಿನ ಭಾಗ ಜಖಂಗೊಂಡಿರುತ್ತದೆ. ಇದು ಅಕ್ರಮ ಸಾರಾಯಿ ಸ್ಯಾಚೆಟ್ ಸಾಗಾಟವಾಗಿರುವುದರಿಂದ ಸಾರಾಯಿ ತೊಟ್ಟೆಗಳನ್ನು ಮತ್ತು ಮಾರುತಿ ಸ್ವಿಫ್ಟ್ ಕಾರನ್ನು ವಶಕ್ಕೆ ತೆಗೆದುಕೊಂಡು ಸ್ಥಳದಲ್ಲೇ ಈ ಬಗ್ಗೆ ಮಹಜರನ್ನು ತಯಾರಿಸಿರುತ್ತೇನೆ.ಮಹಜರಿನಲ್ಲಿ ಕಾರಿನ ಇಂಜಿನ್ ನಂಬರ್ ಮತ್ತು ಚಾಸಿಸ್ ನಂಬರನ್ನು ನಮೂದಿಸಿರುತ್ತೇನೆ.ಸದರಿ ಮಹಜರಿಗೆ

ಸಿಬ್ಬಂದಿಯವರ ಹಾಗೂ ಪಂಚರ ಸಹಿಯನ್ನು ಪಡೆದುಕೊಂಡಿರುತ್ತೇನೆ. ಸದರಿ ಮಹಜರಿನ ಪ್ರತಿಯನ್ನು ನಿಶಾನೆ ಪಿ–1 ಎಂದು ಅದರಲ್ಲಿರುವ ತನ್ನ ಸಹಿಯನ್ನು ನಿ.ಪಿ.–1 ಎ ಎಂದು ಗುರುತಿಸಿರುತ್ತೇನೆ..ನಂತರ ಠಾಣೆಗೆ ಬಂದು, ಈ ಬಗ್ಗೆ ಪ್ರ.ಮಾ.ವ ನ್ನು ತಯಾರಿಸಿ, ಅದನ್ನು ನಿ.ಪಿ–2 ಎಂದು ಅದರಲ್ಲಿರುವ ತನ್ನ ಸಹಿಯನ್ನು ನಿ.ಪಿ–2 ಎ ಎಂದುಗುರುತಿಸಿರುತ್ತೇನೆ. ಸೊತ್ತಿನ ಪಟ್ಟಿಯನ್ನು ನಿ.ಪಿ–3 ಎಂದು ಅದರಲ್ಲಿರುವ ತನ್ನ ಸಹಿಯನ್ನು ನಿ.ಪಿ–3 ಎ ಎಂದು ಗುರುತಿಸಿರುತ್ತೇನೆ ಈ ಬಗ್ಗೆ ಅಧಿಕೃತ ಅಧಿಕಾರಿಗಳು, ಹಾಗೂ ಅಬಕಾರಿ ಅಧೀಕ್ಷಕರು, ದ.ಕ ಜಿಲ್ಲೆ,ಮಂಗಳೂರು ಇವರಿಗೆ ಸದರಿ ಸೊತ್ತುಗಳನ್ನು ಹಸ್ತಾಂತರಿಸುವ ಬಗ್ಗೆ ವರದಿಯನ್ನು ಈ ಪ್ರಾಧಿಕಾರಕ್ಕೆ ದಿ:21–2–2009 ರಂದು ಸಲ್ಲಿಸಿರುತ್ತೇನೆ.ಸದರಿ ವರದಿಯನ್ನು ನಿ.ಪಿ–4 ಎಂದು ಮತ್ತು ಅದರಲ್ಲಿರುವ ತನ್ನ ಸಹಿಯನ್ನು ನಿ.ಪಿ.4 ಎ ಎಂದು ಗುರುತಿಸಿರುತ್ತೇನೆ ಹಾಗೂ ಜಪ್ತುಪಡಿಸಿ ಕೊಂಡ ವಾಹನವನ್ನು ಕೂಡ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬೇಕೆಂದು ನ್ಯಾಯಾಲಯದ ಮುಂದೆ ವಿನಂತಿಸಿಕೊಳ್ಳುತ್ತೇನೆ ಎಂದು ಸಾಕ್ಷಿ ನುಡಿದಿರುತ್ತಾರೆ.

ವಾಹನದ ಮಾಲೀಕರಾಗಲೀ ಮಾಲೀಕರ ಪರ ಪ್ರತಿನಿಧಿಗಳಾಗಲೀ ಪ್ರಾಧಿಕಾರದ ಮುಂದೆ ಹಾಜರಾಗದೇ ಇರುವುದರಿಂದ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಯಿತು.

**ಪ್ರಾ.ಸಾ–2:–**

ಶ್ರೀ ಕುಶಾಲಪ್ಪ,ಪಿ.ಸಿ.–1012,ಬಂಟ್ವಾಳ ನಗರ ಪೊಲೀಸ್ ಠಾಣೆ,ಬಂಟ್ವಾಳ ಇವರು ಪ್ರಕರಣದ ಮಹಜರು ಸಾಕ್ಷಿದಾರರಾಗಿದ್ದು, ಇವರು ದಿ:17–08–2010 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಎಡಿಪಿಯವರ ಮುಖ್ಯ ವಿಚಾರಣೆಗೆ ಉತ್ತರವನ್ನು ನೀಡುತ್ತಾ, ತಾನು ಬಂಟ್ವಾಳ ನಗರ ಪೊಲೀಸ್ ಠಾಣೆಯಲ್ಲಿ ಪೊಲೀಸ್ ಪೇದೆಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ತಮ್ಮ ಪೊಲೀಸ್ ಉಪ ನಿರೀಕ್ಷಕರವರಿಗೆ ದಿ:5–2–2010 ರಂದು ಕಲ್ಲಡ್ಕ ಕಡೆಯಿಂದ ಕೆ.ಸಿ.ರೋಡ್ ಮಾರ್ಗವಾಗಿ ಕೇರಳಕ್ಕೆ ಮಾರುತಿ ಸ್ವಿಫ್ಟ್ ಕಾರಿನಲ್ಲಿ ಅಕ್ರಮವಾಗಿ ಸಾರಾಯಿ ತೊಟ್ಟೆಗಳನ್ನು ಸಾಗಾಟ ಮಾಡುತ್ತಿದ್ದಾರೆ ಎಂಬ ದೊರೆತ ಖಚಿತ ವರ್ತಮಾನದ ಮೇರೆಗೆ ಪಂಚರಾದ ಚೆರಿಯ ಯಾನೆ ಮನ್ಸೂರ್ ಮತ್ತು ಶಿವಪ್ರಸಾದ್ ಇವರೊಂದಿಗೆ ಹಾಗೂ ತಮ್ಮ ಸಿಬ್ಬಂದಿಯವರಾದ ಎ.ಎಸ್.ಐ ಶಾಂತಪ್ಪ ಗೌಡ, ಪಿ.ಸಿ. ಗಳಾದ ಶೈಲೇಂದ್ರ ಪಿ.ಸಿ.608, ವಸಂತಗೌಡ ಪಿ.ಸಿ3 54 ಮತ್ತು ಯಜ್ಞ ನಾರಾಯಣ ಎ.ಪಿ.ಸಿ 110, ಹಾಗೂ ಪೊಲೀಸ್ ಉಪ ನಿರೀಕ್ಷಕರೊಂದಿಗೆ ತಾನು ತಮ್ಮ ಇಲಾಖಾ ಜೀಪಿನಲ್ಲಿ ಠಾಣೆಯಿಂದ ಹೊರಟು, ಬಂಟ್ವಾಳ ತಾಲೂಕು ಅಮ್ಟೂರು ಗ್ರಾಮದ ಕರಿಂಗಾಣ ಬೊಳುವಾಯಿ ಕೂಡು ರಸ್ತೆಯಲ್ಲಿ ಹೊಂಚು ಹಾಕಿ ಕಾಯುತ್ತಿರುವಾಗ ಕೆ.ಸಿ.ರೋಡ್ ಕಡೆಯಿಂದ ಬರುತ್ತಿದ್ದ ಮಾರುತಿ ಸ್ವಿಫ್ಟ್ ಕಾರನ್ನು ಸ್ವಲ್ಪ ದೂರದಲ್ಲಿಯೇ ತಮ್ಮ ಕಡೆಗೆ ಬರುತ್ತಿದ್ದು, ಸಮವಸ್ತ್ರದಲ್ಲಿದ್ದ ತಮ್ಮನ್ನು ಕಂಡು, ಕಾರಿನ ಚಾಲಕ ಕಾರನ್ನು ಸ್ವಲ್ಪ ನಿಧಾನವಾಗಿ ಚಲಾಯಿಸಿ,ಪಕ್ಕನೆ ವಾಪಾಸು ಹಿಂದಕ್ಕೆ ಚಲಾಯಿಸಿ, ಕೆ.ಸಿರೋಡ್ ಕಡೆಗೆ ಚಲಾಯಿಸಿಕೊಂಡು ಹೋದಾಗ ತಾವು ಸದರಿ ಕಾರನ್ನು ಬೆನ್ನಟ್ಟಿಕೊಂಡು ಹೋಗುತ್ತ ಬಂಟ್ವಾಳ ತಾಲೂಕು ಅಮ್ಟೂರು ಗ್ರಾಮದ ಕೆ.ಸಿ.ರೋಡ್ ಕೂಡು ರಸ್ತೆಗೆ ತಲುಪಿದಾಗ ಸದರಿ ಕಾರಿನ ಚಾಲಕನು ವಾಹನದ ವೇಗವನ್ನು ತಗ್ಗಿಸದೇ ಒಮ್ಮೆಲೆ ಬಿ.ಸಿರೋಡ್ ಕಡೆಗೆ ತಿರುಗಿಸಿರುವುದರಿಂದ ವಾಹನದ ಚಾಲನ ಹತೋಟಿ ತಪ್ಪಿ,ರಸ್ತೆಬದಿಯ ಕಲ್ಲಿಗೆ ಡಿಕ್ಕಿ ಹೊಡೆದು, ರಸ್ತೆಯ ಎಡಕ್ಕೆ ಬಿತ್ತು.ಸದರಿ ಚಾಲಕರು ನಾವು ಜೀಪನ್ನು ನಿಲ್ಲಿಸಿ ಇಳಿದು ಹೋಗುವಷ್ಟರಲ್ಲಿ ಕಾರಿನಿಂದ ಇಳಿದು,ರಸ್ತೆಯ ಸ್ವಲ್ಪ ದೂರದಲ್ಲಿಯೆ ಗುಡ್ಡೆಯ ಕಡೆಗೆ ಓಡಿತಪ್ಪಿಸಿಕೊಂಡು ಪರಾರಿಯಾದರು. ನಂತರ ಸಿಬ್ಬಂದಿ ಹಾಗೂ ಪಂಚರ ಸಮಕ್ಷಮದಲ್ಲಿ ಸದರಿ ಮಾರುತಿ ಸ್ವಿಫ್ಟ್ ಕಾರನ್ನು ಪರಿಶೀಲಿಸಿದಾಗ ಮಾರುತಿ ಕಾರಿನ ಹಿಂದಿನ ಸೀಟಿನಲ್ಲಿ ಸಾರಾಯಿ ತುಂಬಿದ ತೊಟ್ಟೆಗಳನ್ನು ಪಾಲಿಥಿನ್ ಚೀಲಗಳಲ್ಲಿ ಕಟ್ಟಿ, ಕಾರಿನ ಹಿಂದಿನ ಸೀಟಿನಲ್ಲಿ ಇಟ್ಟಿರುವುದು ಕಂಡು ಬಂತು.ಸದರಿ ಸಾರಾಯಿ ತುಂಬಿದ ತೊಟ್ಟೆಗಳನ್ನು ಹಾಕಿದ ಪಾಲಿಥಿನ್ ಚೀಲವನ್ನು ಹೊರಕ್ಕೆ ತೆಗೆದು ಪರಿಶೀಲಿಸಿದಾಗ 15 ಪಾಲಿಥಿನ್ ಚೀಲದಲ್ಲಿ ಸಾರಾಯಿ ತುಂಬಿದ ತೊಟ್ಟೆಗಳಿದ್ದು, ಪ್ರತಿಯೊಂದು ಸಾರಾಯಿ ತುಂಬಿದ ತೊಟ್ಟೆಗಳ ಮೇಲೆ ಅಬಕಾರಿ ಭದ್ರತಾ ಉಗ್ರಾಣದಲ್ಲಿ ತಯಾರಿಸಲಾಗಿದ್ದು, ದಿ.ಮೈಸೂರು ಶುಗರ್ ಕಂ.ಲಿ.,ಮಂಡ್ಯ ಸಾರಾಯಿ ಮದ್ಯಪಾನ ಆರೋಗ್ಯಕ್ಕೆ ಹಾನಿಕರ ಮತ್ತು ಕರ್ನಾಟಕ ರಾಜ್ಯದಲ್ಲಿ ಮಾರಾಟಕ್ಕೆ ಮಾತ್ರ, ಕರ್ನಾಟಕ ರಾಜ್ಯದ ಮೊಹರು ಇದ್ದು,ಎಲ್ಲಾ ಸಾರಾಯಿ ತುಂಬಿದ ತೊಟ್ಟೆಗಳ ಮೇಲೆ 100 ಎಂ.ಎಲ್.ಎಂದು ಬರೆದಿರುತ್ತದೆ. ಸಾರಾಯಿ ತೊಟ್ಟೆಗಳ ಮೇಲೆ ಇರುವ ಅಕ್ಷರಗಳು ಎಲ್ಲಾ ಕೆಂಪು ಬಣ್ಣದಲ್ಲಿದೆ. ಸದರಿ 15 ಪಾಲಿಥಿನ್ ಚೀಲಗಳಿರುವ ಸಾರಾಯಿ ತೊಟ್ಟೆಗಳನ್ನು ಪರಿಶೀಲಿಸಿದಾಗ ಒಂದೊಂದು ಚೀಲದಲ್ಲಿ ತಲಾ 400ರಂತೆ ಸಾರಾಯಿ ತುಂಬಿದ ತೊಟ್ಟೆಗಳಿದ್ದು,ಒಟ್ಟು 15 ಪಾಲಿಥಿನ್ ಚೀಲಗಳಲ್ಲಿ 100 ಎಂ.ಎಲ್.ನ 6000 ಸಾರಾಯಿ ತೊಟ್ಟೆಗಳಿರುವುದು ಕಂಡು ಬಂತು. ಪ್ರತಿಯೊಂದು ಸಾರಾಯಿ ತುಂಬಿದ ಪಾಲಿಥಿನ್ ಚೀಲದಿಂದ ತಲ ಎರಡೆರಡರಂತೆ ಸಾರಾಯಿ ತುಂಬಿದ ತೊಟ್ಟೆಗಳನ್ನು ತೆಗೆದು, ಅವುಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಬಿಳಿಬಟ್ಟೆಗಳಿಂದ ಪ್ಯಾಕ್ ಮಾಡಿ,ಅರಗು ಹಾಕಿ, ಎಸ್.ಹೆಚ್.ಒ ಸೀಲು ಮಾಡಿ, ಸಾರಾಯಿ ತುಂಬಿದ ಪಾಲಿತಿನ್ ಚೀಲಕ್ಕೆ ಎ ರಿಂದ ಒ ತನಕ ಮತ್ತು ಮಾದರಿಗೆ ತೆಗೆದ ಸಾರಾಯಿ ತುಂಬಿದ ತೊಟ್ಟೆಗಳಿಗೆ ಎ 1 ರಿಂದ ಒ2 ಎಂದು ಕೆಂಪು ಬಣ್ಣದಲ್ಲಿ ಗುರುತು ಮಾಡಲಾಯಿತು. ಸದರಿ ಸ್ವಿಫ್ಟ್ ಕಾರನ್ನು ಪರಿಶೀಲಿಸಿದಾಗ ಅದರ ನೊಂದಣಿ ಸಂ:ಕೆಎ–09–ಎಂ–9581 ಆಗಿದ್ದು, ಇದರ ಬಣ್ಣ ಸ್ಟೀಲ್ ಗ್ರೇ ಆಗಿರುತ್ತದೆ. ಕಾರಿನ ಒಳಗಡೆ ನಂಬರ್ ಪ್ಲೇಟುಗಳು ದೊರೆತಿದ್ದು,ಅದನ್ನು ತೆಗೆದು ನೋಡಲಾಗಿ ಕೆ.ಎಲ್–10 ಜೆಡ್–1057 ಆಗಿರುತ್ತದೆ. ಕಾರಿನ ಎದುರಿನ ಭಾಗ ಜಖಂಗೊಂಡಿರುತ್ತದೆ. ಇದು ಅಕ್ರಮ ಸಾರಾಯಿ ಸ್ಯಾಚೆಟ್ ಸಾಗಾಟವಾಗಿರುವುದರಿಂದ ಸಾರಾಯಿ ತೊಟ್ಟೆಗಳನ್ನು ಮತ್ತು ಮಾರುತಿ ಸ್ವಿಫ್ಟ್ ಕಾರನ್ನು ವಶಕ್ಕೆ ತೆಗೆದುಕೊಂಡು ಸ್ಥಳದಲ್ಲೇ ಈ ಬಗ್ಗೆ ಮಹಜರನ್ನು ಪೊಲೀಸ್ ಉಪ ನಿರೀಕ್ಷಕರವರು ತಯಾರಿಸಿರುತ್ತಾರೆ.ಸದರಿ ಮಹಜರನ್ನು ಈಗಾಗಲೇ ನಿ.ಪಿ–1 ಎಂದು ಗುರುತಿಸಲಾಗಿದ್ದು, ಅದರಲ್ಲಿರುವ ತನ್ನ ಸಹಿಯನ್ನು .ನಿ.ಪಿ.–1 ಬಿ ಎಂದು ಗುರುತಿಸಿರುತ್ತೇನೆ ಆದುದರಿಂದ ಅಕ್ರಮ ಸಾರಾಯಿ ಸ್ಯಾಚೆಟುಗಳನ್ನು ಸಾಗಾಟ ಮಾಡಿರುವುದು ಖಚಿತವಾಗಿ ರುವುದರಿಂದ ಜಪ್ತುಪಡಿಸಿಕೊಂಡ ವಾಹನವನ್ನು ಕೂಡ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬೇಕೆಂದು ನ್ಯಾಯಾಲಯದ ಮುಂದೆ ವಿನಂತಿಸಿಕೊಳ್ಳುತ್ತೇನೆ ಎಂದು ಸಾಕ್ಷಿ ನುಡಿದಿರುತ್ತಾರೆ.

ವಾಹನದ ಮಾಲೀಕರಾಗಲೀ ಮಾಲೀಕರ ಪರ ಪ್ರತಿನಿಧಿಗಳಾಗಲೀ ಪ್ರಾಧಿಕಾರದ ಮುಂದೆ ಹಾಜರಾಗದೇ ಇರುವುದರಿಂದ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಯಿತು.

ಪ್ರಾ.ಸಾ–3 :–

ಶ್ರೀ ಕಮಲಾಕ್ಷ ಬಲ್ಯಾಯ, ಅಬಕಾರಿ ನಿರೀಕ್ಷಕರು,ಬಂಟ್ವಾಳ ವಲಯ,ಬಂಟ್ವಾಳ ಇವರು ಪ್ರಕರಣದ ತನಿಖಾಧಿಕಾರಿಯಾಗಿದ್ದು, ಇವರು ದಿ:17–08–2010 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಎಡಿಪಿಯವರ ಮುಖ್ಯ ವಿಚಾರಣೆಗೆ ಉತ್ತರವನ್ನು ನೀಡುತ್ತಾ, ತಾನು ಬಂಟ್ವಾಳ ವಲಯ ಅಬಕಾರಿ ನಿರೀಕ್ಷಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ಈ ಪ್ರಾಧಿಕಾರದ ಆದೇಶ ಸಂ:ಎಸ್‌ಡಿಕೆ/269/ಡಿಟಿಸಿಆರ್/08–09 ದಿ:13–3–2009ರ ಆದೇಶದಂತೆ ತಕ್ಷೀರಿನಲ್ಲಿ ವಶಪಡಿಸಿಕೊಂಡ ಮಾರುತಿ ಸ್ವಿಫ್ಟ್ ಕಾರು ಹಾಗೂ ಪಾಲಿಥಿನ್ ಚೀಲದಲ್ಲಿರುವ 100 ಎಂ.ಎಲ್‌ನ 30 ಸಾರಾಯಿ ಸ್ಯಾಚೆಟ್‌ಗಳ ಸ್ಯಾಂಪಲುಗಳನ್ನು ಹೊರತುಪಡಿಸಿ ಉಳಿದ ಸಾರಾಯಿ ಸ್ಯಾಚೆಟ್‌ಗಳನ್ನು ದಿ:08–3–2010ರಂದು ಪೊಲೀಸ್ ಉಪ ನಿರೀಕ್ಷಕರು, ಬಂಟ್ವಾಳ ನಗರ ಪೊಲೀಸ್ ಠಾಣೆ ಇವರಿಂದ ಪಡೆದುಕೊಂಡಿರುತ್ತೇನೆ. ಈ ಬಗ್ಗೆ ವರದಿಯನ್ನು ಈ ಪ್ರಾಧಿಕಾರಕ್ಕೆ ದಿ:20–3–2010ರಂದು ಸಲ್ಲಿಸಿರುತ್ತೇನೆ. ಸದರಿ ವರದಿಯನ್ನು ನಿಶಾನೆ ಪಿ–5 ಎಂದು ಅದರಲ್ಲಿರುವ ತನ್ನ ಸಹಿಯನ್ನು ನಿ.ಪಿ–5ಎ ಎಂದು ಗುರುತಿಸಿರುತ್ತೇನೆ. ತಕ್ಷೀರಿನಲ್ಲಿ ವಶಪಡಿಸಿಕೊಂಡ ಸಾರಾಯಿ ಸ್ಯಾಚೆಟ್‌ಗಳ ಸ್ಯಾಂಪಲುಗಳನ್ನು ರಾಸಾಯನಿಕ ವಿಶ್ಲೇಷಕರು ಮಂಗಳೂರು ಇವರಿಗೆ ಪೊಲೀಸ್‌ನವರೇ ಕಳುಹಿಸಲಾಗಿದ್ದು, ಇವರು ರಾಸಾಯನಿಕ ವಿಶ್ಲೇಷಕರು,ದ.ಕ ಜಿಲ್ಲೆ,ಮಂಗಳೂರುರವರು ಸಲ್ಲಿಸಿದ ವರದಿ ಸಂ:ಇ–20–30 ದಿ:26–2–2010ರ ವರದಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತೇನೆ.ಸದರಿ ವರದಿಯನ್ನು ನಿಶಾನೆ ಪಿ–6 ಎಂದು ಗುರುತಿಸಲಾಯಿತು. ಸದರಿ ಸಾರಾಯಿ ಸ್ಯಾಚೆಟ್ ಹಾಗೂ ಮಾರುತಿ ಸ್ವಿಫ್ಟ್ ಕಾರಿನ ಸೊತ್ತಿನ ಬಗ್ಗೆ ಯಾರೂ ತಮ್ಮ ಕಚೇರಿಯಲ್ಲಿ ಸ್ವಾಧೀನ ಬಗ್ಗೆ ಅರ್ಜಿ ಸಲ್ಲಿಸದಿರುವುದರಿಂದ ಸದರಿ ಸಾರಾಯಿ ಸ್ಯಾಚೆಟ್‌ಗಳನ್ನು ಮತ್ತು ಸ್ವಿಫ್ಟ್ ಕಾರನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಬಗ್ಗೆ ದಿ:3–5–2010 ರಂದು ತನಿಖಾ ವರದಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿದ್ದು,ಸದರಿ ವರದಿಯನ್ನು ನಿ.ಪಿ–7ಎಂದು ಅದರಲ್ಲಿರುವ ತನ್ನ ಸಹಿಯನ್ನು ನಿ.ಪಿ–7ಎ ಎಂದು ಗುರುತಿಸಲಾಯಿತು. ಈ ಪ್ರಾದಿಕಾರದ ಆದೇಶ ಸಂ:ಎಸ್‌ಡಿಕೆ/269/ ಡಿಟಿಸಿಆರ್/08–09 ದಿ:24–5–2010ರ ಮುಟ್ಟುಗೋಲು ಆದೇಶದಂತೆ ತಕ್ಷೀರಿನಲ್ಲಿ ವಶಪಡಿಸಿಕೊಂಡ ಸಾರಾಯಿ ಸ್ಯಾಚೆಟ್ ಗಳನ್ನು ದಿ:12–6–2010ರಂದು ಬಂಟ್ವಾಳ ಉಪ ವಿಭಾಗ ಕಚೇರಿಯ ಆವರಣದಲ್ಲಿ ಮಹಜರು ಜರುಗಿಸಿ ನಾಶಪಡಿಸಿದ್ದು, ಈ ಬಗ್ಗೆ ವರದಿಯನ್ನು ದಿ:12–6–2010 ರಂದು ಅಬಕಾರಿ ಉಪ ಅಧೀಕ್ಷಕರು,ಬಂಟ್ವಾಳ ಉಪ ವಿಭಾಗ, ಬಂಟ್ವಾಳರವರು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.ನಾಶಪಡಿಸಿದ ಮಹಜರಿನ ಪ್ರತಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿದ್ದು, ಸದರಿ ಮಹಜರನ್ನು ನಿ.ಪಿ–8 ಎಂದು ಅದರಲ್ಲಿರುವ ತನ್ನ ಸಹಿಯನ್ನು ನಿ.ಪಿ–8 ಎ ಎಂದು ಗುರುತಿಸಿರುತ್ತೇನೆ.ಪೊಲೀಸ್ ಇಲಾಖೆಯವರು ತಕ್ಷೀರಿಗೆ ಸಂಬಂಧಿಸಿ ಮಾರುತಿ ಸ್ವಿಫ್ಟ್ ಕಾರು ಸಂ:ಕೆಎಲ್–10–ಜೆಡ್–1057 ರ ಬಿ ಎಕ್ಸ್‌ಟ್ರಾಕ್ಟ್ ವರದಿಯನ್ನು ಸಲ್ಲಿಸಿದ್ದು, ಸದರಿ ವರದಿ ಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತೇನೆ. ಸದರಿ ಬಿ ಎಕ್ಸ್‌ಟ್ರಾಕ್ಟ್ ವರದಿಯನ್ನು ನಿ.ಪಿ–9 ಎಂದು ಅದರಲ್ಲಿರುವ ತನ್ನ ಸಹಿಯನ್ನು ನಿ.ಪಿ–9ಎ ಎಂದು ಗುರುತಿಸಿರುತ್ತೇನೆ. ತಕ್ಷೀರಿನಲ್ಲಿ ವಶಪಡಿಸಿಕೊಂಡ ಮಾರುತಿ ಸ್ವಿಫ್ಟ್ ಕಾರಿನ ಬಗ್ಗೆ ವಾಹನದ ಮಾಲೀಕರಾಗಲಿ ಅವರ ಪರ ವಕೀಲರಾಗಲಿ ಹಾಗೂ ಓಡಿ ಹೋದ ಆರೋಪಿಯಾಗಲಿ ತನ್ನ ಕಚೇರಿಯಲ್ಲಿ ವಾಹನದ ಬಿಡುಗಡೆ ಬಗ್ಗೆ ಯಾರೂ ಕೂಡ ಅರ್ಜಿ ಸಲ್ಲಿಸಿರುವುದಿಲ್ಲ. ವಾಹನವನ್ನು ವಶಪಡಿಸಿಕೊಂಡು ಈಗಾಗಲೇ 1 ವರ್ಷ 7 ತಿಂಗಳು ಕಳೆದರೂ ವಾಹನದ ಬಿಡುಗಡೆಗಾಗಿ ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ನಿಶಾನೆ ಪಿ–8 ರ ವರದಿಯಂತೆ ತಕ್ಷೀರಿನಲ್ಲಿ ವಶಪಡಿಸಿಕೊಂಡ ಮಾರುತಿ ಸ್ವಿಫ್ಟ್ ಕಾರನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಬಹಿರಂಗ ಹರಾಜಿನಲ್ಲಿ ವಿಲೇವಾರಿ ಗೊಳಿಸಬೇಕೆಂದು, ನ್ಯಾಯಾಲಯದ ಮುಂದೆ ವಿನಂತಿಸಿಕೊಳ್ಳುತ್ತೇನೆ ಎಂದು ಸಾಕ್ಷಿ ನುಡಿದಿರುತ್ತಾರೆ.

ವಾಹನದ ಮಾಲೀಕರಾಗಲೀ ಮಾಲೀಕರ ಪರ ಪ್ರತಿನಿಧಿಗಳಾಗಲೀ ಪ್ರಾಧಿಕಾರದ ಮುಂದೆ ಹಾಜರಾಗದೇ ಇರುವುದರಿಂದ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಯಿತು.

ಪ್ರಕರಣದ ಫಿರ್ಯಾದುದಾರರು, ಮಹಜರು ಸಾಕ್ಷಿದಾರರು ಹಾಗೂ ತನಿಖಾಧಿಕಾರಿಯವರು ಪೂರಕವಾಗಿ ನೀಡಿರುವ ಸಾಕ್ಷ್ಯಾಧಾರದ ಮೇಲೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ದಿ:05–02–2009 ರಂದು ಜಪ್ತು ಪಡಿಸಿಕೊಂಡಿರುವ ಮಾರುತಿ ಸ್ವಿಫ್ಟ್ ಕಾರು ಸಂಖ್ಯೆ:ಕೆಎಲ್–10 ಜೆಡ್–1057(ನಕಲಿ ಸಂ:ಕೆಎ–09ಎಂ–9581) ರಲ್ಲಿ ಅಕ್ರಮವಾಗಿ 100 ಎಂ.ಎಲ್ ನ 6000 ಸಾರಾಯಿ ಸ್ಯಾಚೆಟ್‌ಗಳನ್ನು ಯಾವುದೇ ಅಧಿಕೃತ ರಹದಾರಿ ಪತ್ರವಿಲ್ಲದೆ ಸಾಗಾಣಿಕೆಯಾಗಿರುವುದು ಸಾಬೀತಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ. ವಾಹನ ಮಾಲೀಕರ ಪರ ಹಾಗೂ ಅವರ ಪರ ವಕೀಲರು ಯಾರೂ ಈ ಪ್ರಾಧಿಕಾರದ ಮುಂದೆ ವಾಹನದ ಬಿಡುಗಡೆಗಾಗಿ ವಾಹನಕ್ಕೆ ಸಂಬಂಧಿಸಿ ಅಧಿಕೃತ ದಾಖಲಾತಿಗಳೊಂದಿಗೆ ಯಾವುದೇ ಅರ್ಜಿ ಸಲ್ಲಿಸದೇ ಇರುವ ಕಾರಣಕ್ಕೆ ಎರಡನೇ ಅಂಶವನ್ನು ಗಣನೆಗೆ ತೆಗೆದುಕೊಳ್ಳುವ ಅಗತ್ಯತೆವಿರುವುದಿಲ್ಲ.

1965ನೇ ಕರ್ನಾಟಕ ಅಬಕಾರಿ ಕಾಯಿದೆಯಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಯಿಲ್ಲದಿದ್ದಲ್ಲಿ, ಪ್ರಕರಣವನ್ನು ಪತ್ತೆ ಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಪ್ತಾಗಿರುವ ಸೊತ್ತುಗಳು ತಮ್ಮದೆಂದು, ಅವುಗಳು ಕಾನೂನುಬದ್ದವಾಗಿದೆಯೆಂದು ಸಾಕ್ಷ್ಯಾಧಾರ ದೊಂದಿಗೆ ಸಾಬೀತುಪಡಿಸದೇ ಇದ್ದಲ್ಲಿ, ಸದರಿ ಸೊತ್ತುಗಳು ಕರ್ನಾಟಕ ಅಬಕಾರಿ ಕಾಯಿದೆ ಕಾಲಂ 43ರ ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ, ಅಂತಹ ಸೊತ್ತುಗಳನ್ನು ಕಾಲಂ 43 (ಸಿ) ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳ ಬಹುದಾಗಿರುತ್ತದೆ.

ಸದರಿ ಪ್ರಕರಣದಲ್ಲಿ ಪೊಲೀಸ್ ಉಪ ನಿರೀಕ್ಷಕರು,ಬಂಟ್ವಾಳ ನಗರ ಪೊಲೀಸ ಠಾಣೆ, ಬಂಟ್ವಾಳ ಇವರು ದಾಖಲಿಸಿರುವ ಪ್ರಕರಣದಲ್ಲಿ ಆರೋಪಿಗಳು ಅಕ್ರಮವಾಗಿ ಸಾರಾಯಿ ಸ್ಯಾಚೆಟ್‌ಗಳನ್ನು ಸಾಗಾಣಿಕೆ ಮಾಡುವಾಗ ವಾಹನವನ್ನು ಪಂಚನಾಮೆಯ ಮುಖಾಂತರ ಸ್ವಾಧೀನಪಡಿಸಿದ್ದು ಹಾಗೂ ವಾಹನದಲ್ಲಿ ಜಪ್ತು ಪಡಿಸಲಾಗಿರುವ ವಸ್ತು ರಾಸಾಯನಿಕ ತಜ್ಞರ ಅಭಿಪ್ರಾಯದಂತೆ ಸಾರಾಯಿಯೆಂದು ದೃಢಪಟ್ಟಿದ್ದು, ಸದರಿ ವಾಹನವನ್ನು ಕರ್ನಾಟಕ ಅಬಕಾರಿ ಕಾನೂನಿನ ಉಲ್ಲಂಘನೆಗಾಗಿ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುವುದಾಗಿ ಈ ಪ್ರಾಧಿಕಾರವು ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ.

ತಕ್ಷೀರಿನಲ್ಲಿ ವಶಪಡಿಸಿಕೊಂಡ ಮಾರುತಿ ಸ್ವಿಫ್ಟ್ ಕಾರು ಸಂಖ್ಯೆ:ಕೆಎಲ್–10ಜೆಡ್–1057 (ನಕಲಿ ಸಂ:ಕೆಎ–09ಎಂ–9581) ನ್ನು ವಶಪಡಿಸಿಕೊಂಡು ಸುಮಾರು 1 ವರ್ಷ 7 ತಿಂಗಳು ಕಳೆದರೂ ಈ ಪ್ರಾಧಿಕಾರದ ಮುಂದೆ ಇದುವರೆಗೂ ವಾಹನದ ಬಿಡುಗಡೆಗಾಗಿ ಅಧಿಕೃತ

ದಾಖಲಾತಿಗಳೊಂದಿಗೆ ವಾಹನ ಮಾಲೀಕರ ಪರ ಹಾಗೂ ಪರಾರಿಯಾದ ಆರೋಪಿಗಳು ಕೂಡಾ ವಾಹನವು ತನ್ನದೆಂದು ಬಿಡುಗಡೆ ಅರ್ಜಿ ಸಲ್ಲಿಸಿರುವುದಿಲ್ಲ. ಈ ಪ್ರಾಧಿಕಾರವು ವಾಹನದ ಮಾಲೀಕರಾದ Sri Sukumaran V.O, Palakott House, Puthukode Post Office, Mallampuram,Trichur,Kerala State ಮತ್ತು ಹೆಚ್.ಪಿ.ಎ.ದಾರರಾದ ಶ್ರೀ ರಾಮ್ ಟ್ರಾನ್ಸ್‌ಪೋರ್ಟ್ ಫೈನಾನ್ಸ್,ಚೆನ್ನೈ ಇವರಿಗೆ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43 (ಬಿ)ರನ್ವಯ ಕಾರಣ ಕೇಳಿ ನೋಟೀಸುಗಳನ್ನು ನೀಡಲಾಗಿದ್ದು, ಸದರಿ ನೋಟೀಸಿಗೆ ನೀಡಿರುವ ಉತ್ತರಕ್ಕೆ ಅನುಗುಣವಾಗಿ ಹೆಚ್.ಪಿ.ಎದಾರರಾದ ಶ್ರೀ ರಾಮ್ ಟ್ರಾನ್ಸ್ ಪೋರ್ಟ್ ಫೈನಾನ್ಸ್, ಚೆನ್ನೈ ಇವರು ದಿ:9-7-2010 ರಂದು ಉತ್ತರವನ್ನು ಸಲ್ಲಿಸುತ್ತಾ ಸದರಿ ವರದಿಯಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನದ ನೊಂದಣಿ ಸಂ:ಕೆಎ-09ಎಂ-9581 ಮತ್ತು ಕೆಎಲ್-10-ಜೆಡ್-9581ರ ಬಗ್ಗೆ ಪರಿಶೀಲಿಸಲು ಅಸಾಧ್ಯವಾಗಿರುವ ಕಾರಣ ತಮಗೆ ಎರಡು ವಾರಗಳ ಕಾಲ ಬೇಕೆಂದು ತಮ್ಮ ಅರ್ಜಿಯಲ್ಲಿ ಕೋರಿರುತ್ತಾರೆ. ಆದರೆ ಇದುವರೆಗೂ ಯಾವುದೇ ಅಧಿಕೃತ ದಾಖಲಾತಿಗಳೊಂದಿಗೆ ಅರ್ಜಿ ಸಲ್ಲಿಸಿರುವುದಿಲ್ಲ.ವಾಹನದ ನೊಂದಣಿ ಮಾಲೀಕರಾದ ಶ್ರೀ ಸುಕುಮಾರನ್ ಇವರಿಗೆ ನೀಡಿದ ಕಾರಣ ಕೇಳಿ ನೋಟೀಸು ಸ್ವೀಕೃತಿಯಾಗದೇ ಹಿಂದೆ ಬಂದಿರುತ್ತದೆ. ಆರೋಪಿಗಳು ವಶಪಡಿಸಿಕೊಂಡ ಮಾರುತಿ ಸ್ವಿಫ್ಟ್ ಕಾರಿಗೆ ನಕಲಿ ನಂಬರುಗಳನ್ನು ಅಳವಡಿಸಿ,ಕೇರಳ ರಾಜ್ಯಕ್ಕೆ ಅಕ್ರಮವಾಗಿ ಸಾರಾಯಿ ಸ್ಯಾಚೆಟ್‌ಗಳನ್ನು ಸಾಗಾಟ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಪ್ರಕರಣವು ದಾಖಲಾಗಿ ಈಗಾಗಲೇ 1 ವರ್ಷ 7 ತಿಂಗಳು ಕಳೆದರೂ ಈ ಪ್ರಾದಿಕಾರದಲ್ಲಿ ವಾಹನದ ಬಿಡುಗಡೆಗಾಗಿ ವಾಹನದ ಮಾಲೀಕರಾಗಲೀ ಹಾಗೂ ಅವರ ಪರ ವಕೀಲರಾಗಲೀ ಮತ್ತು ಓಡಿ ಹೋದ ಆರೋಪಿಯಾಗಲೀ ಅಧಿಕೃತ ದಾಖಲಾತಿಗಳೊಂದಿಗೆ ಅರ್ಜಿ ಸಲ್ಲಿಸಿರುವುದಿಲ್ಲ. ಈ ಬಗ್ಗೆ ಯಾವುದೇ ಪ್ರತಿಕ್ರಿಯೆಯನ್ನು ನೀಡದಿರುವುದರಿಂದ ವಾಹನದ ಬಗ್ಗೆ ಯಾವುದೇ ಉತ್ಸುಕರಾಗಿರುವುದಿಲ್ಲವೆಂದು ಪ್ರಾಧಿಕಾರವು ತೀರ್ಮಾನ ತೆಗೆದುಕೊಳ್ಳಬೇಕಾಗುತ್ತದೆ. ಫಿರ್ಯಾದುದಾರರು ಸಲ್ಲಿಸಿದ ಮಹಜರಿನಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಸಾರಾಯಿ ಸ್ಯಾಂಪಲ್‌ಗಳನ್ನು ರಾಸಾಯನಿಕ ವಿಶ್ಲೇಷಣೆ ತಜ್ಞರಿಗೆ ಕಳುಹಿಸಲಾಗಿದ್ದು, ತಜ್ಞರ ವರದಿಯಂತೆ ಸಾರಾಯಿಯ ಮದ್ಯಸಾರ ಪ್ರಮಾಣ ಶೇ.22 ಇರುವುದಾಗಿ ದೃಢೀಕರಣ ಪತ್ರವನ್ನು ನೀಡಿರುತ್ತಾರೆ. ಆದುದರಿಂದ ಸದ್ರಿ ಮಾರುತಿ ಸ್ವಿಫ್ಟ್ ಕಾರು ಸಂ:ಕೆಎಲ್-10ಜೆಡ್-1057(ನಕಲಿ ಸಂ:ಕೆಎ-09 ಎಂ-9581)ರಲ್ಲಿ ನಕಲಿ ನಂಬರ್ ಅಳವಡಿಸಿ, ಅಕ್ರಮವಾಗಿ ಸಾರಾಯಿ ಸ್ಯಾಚೆಟ್‌ಗಳನ್ನು ಹೊಂದಿ ಕೇರಳ ರಾಜ್ಯಕ್ಕೆ ಸಾಗಾಟ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಸದ್ರಿ ವಾಹನದ ಬಿಡುಗಡೆಗಾಗಿ ಇದುವರೆಗೂ ಆರೋಪಿಯಾಗಲೀ,ವಾಹನದ ಮಾಲೀಕರ ಪರವಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ಪ್ರಾಧಿಕಾರದ ಮುಂದೆ ವಾಹನವನ್ನು ಬಿಡುಗಡೆ ಗೊಳಿಸಲು ಅರ್ಜಿ ಸಲ್ಲಿಸಿರುವುದಿಲ್ಲ. ವಾಹನದಲ್ಲಿ ಅಕ್ರಮವಾಗಿ ಸಾರಾಯಿ ಸ್ಯಾಚೆಟ್‌ಗಳನ್ನು ಸಾಗಾಟವಾಗಿರುವುದರಿಂದ ತಕ್ಷೀರಿನಲ್ಲಿ ವಶಪಡಿಸಿಕೊಂಡ ಎಲ್ಲಾ ಸೊತ್ತುಗಳನ್ನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43 ಎ ರಡಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುವುದರಿಂದ, ಈ ಪ್ರಕರಣದಲ್ಲಿ ಅಕ್ರಮ ಸಾಗಾಟಕ್ಕೆ ಬಳಸಿದ ಮಾರುತಿ ಸ್ವಿಫ್ಟ್ ಕಾರು ಸಂಖ್ಯೆ:ಕೆಎಲ್-10ಜೆಡ್-1057 (ನಕಲಿಸಂ:ಕೆಎ-09ಎಂ-9581) ನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ/269/ಡಿಟಿಸಿಆರ್/2008-09 ದಿ: 20-08-2010**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಾಲಂ 43 (ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, ನಿಯಮ 43 (ಬಿ) ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಪೋಲೀಸ್ ಉಪ ನಿರೀಕ್ಷಕರು,ಬಂಟ್ವಾಳ ನಗರ ಪೊಲೀಸ್ ಠಾಣೆ, ಬಂಟ್ವಾಳ ಇವರ ತಕ್ಷೀರು ಸಂ: 25/2009 ದಿ:05-02-2009 ರಲ್ಲಿ ಜಪ್ತುಪಡಿಸಿರುವ ಮಾರುತಿ ಸ್ವಿಫ್ಟ್ ಕಾರು ಸಂಖ್ಯೆ: ಕೆಎಲ್-10ಜೆಡ್-1057 (ನಕಲಿ ಸಂ:ಕೆಎ-09ಎಂ-9581)ನ್ನು ನಿಯಮ 43 (ಸಿ) ರನ್ವಯ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ:20-08-2010 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ-1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ**

ಪ್ರಾ.ಸಾ-1: ಶ್ರೀ ಮಾಧವ ಕೂಡ್ಲು, ಪೂಂಜಲಕಟ್ಟೆ ಔಟ್ ಪೋಸ್ಟ್, ಬಂಟ್ವಾಳ

ಪ್ರಾ.ಸಾ-2: ಶ್ರೀ ಕುಶಾಲಪ್ಪ,ಪಿ.ಸಿ.-1012, ಬಂಟ್ವಾಳ ನಗರ ಪೊಲೀಸ್ ಠಾಣೆ, ಬಂಟ್ವಾಳ

ಪ್ರಾ.ಸಾ-3 :ಶ್ರೀ ಕಮಲಾಕ್ಷ ಬಲ್ಯಾಯ, ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ, ಬಂಟ್ವಾಳ

**ಅನುಬಂಧ-2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲಾತಿಗಳು**

ನಿಶಾನೆ ಪಿ-1 : ಮಹಜರು.

ನಿಶಾನೆ ಪಿ-1ಎ: ಮಹಜರಿನಲ್ಲಿ ಫಿರ್ಯಾದುದಾರರ ಸಹಿ

ನಿಶಾನೆ ಪಿ-1ಬಿ: ಮಹಜರಿನಲ್ಲಿ ಪ್ರಾ.ಸಾ-2 ರವರ ಸಹಿ

ನಿಶಾನೆ ಪಿ-2 : ಪ್ರಥಮ ಮಾಹಿತಿ ವರದಿ

ನಿಶಾನೆ ಪಿ-2ಎ : ಪ್ರಥಮ ಮಾಹಿತಿ ವರದಿಯಲ್ಲಿ ಫಿರ್ಯಾದುದಾರರ ಸಹಿ

ನಿಶಾನೆ ಪಿ–3 : ಸೊತ್ತಿನ ಪಟ್ಟಿ

ನಿಶಾನೆಪಿ–3 ಎ: ಸೊತ್ತಿನ ಪಟ್ಟಿಯಲ್ಲಿ ಫಿರ್ಯಾದುದಾರರ ಸಹಿ

ನಿಶಾನೆ ಪಿ–4 : ಈ ಪ್ರಾಧಿಕಾರಕ್ಕೆ ದಿ:21–2–2009 ರಂದು ಸಲ್ಲಿಸಿದ ವರದಿ

ನಿಶಾನೆ ಪಿ–4 ಎ : ವರದಿಯಲ್ಲಿ ಫಿರ್ಯಾದುದಾರರ ಸಹಿ

ನಿಶಾನೆ ಪಿ–5 : ಪ್ರಾಸಾ –3 ರವರ ತನಿಖಾ ವರದಿ

ನಿಶಾನೆ ಪಿ–5 ಎ: ಪ್ರಾಸಾ–3 ರವರ ಸಹಿ

ನಿಶಾನೆ ಪಿ–6: ರಾಸಾಯನಿಕ ವಿಶ್ಲೇಷಕರ ವರದಿ

ನಿಶಾನೆ ಪಿ–7: ಪ್ರಾಸಾ –3 ರವರ ತನಿಖಾ ವರದಿ

ನಿಶಾನೆ ಪಿ=7 ಎ: ಪ್ರಾಸಾ–3 ರವರ ಸಹಿ

ನಿಶಾನೆ ಪಿ–8: ಪ್ರಾಸಾ–3 ರವರ ತನಿಖಾ ವರದಿ

ನಿಶಾನೆ ಪಿ–8 ಎ:ಪ್ರಾಸಾ–3 ರವರ ಸಹಿ

ನಿಶಾನೆ ಪಿ–9: ಬಿ ಅಬ್‌ಸ್ಟ್ರ್ಯಾಕ್ಟ್ ವರದಿ.

ನಿಶಾನೆ ಪಿ–9 ಎ: ಪ್ರಾಸಾ–3 ರವರ ಸಹಿ

**ಅನುಬಂಧ–3**

ವಾಹನ ಮಾಲೀಕರ ಪರ ವಿಚಾರಣೆಗೆ ಯಾರೂ ಹಾಜರಾಗಿರುವುದಿಲ್ಲ.

**ಅನುಬಂಧ–4**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ಸಾಕ್ಷಿದಾರರು

–ಇಲ್ಲ–

**ನೂರ್ ಮಹಮ್ಮದ್ ಹುಸೇನ್**

ಪಿ.ಆರ್.1389

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದ.ಕ.ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ: ಎಸ್‌ಡಿಕೆ/159/ಡಿಟಿಸಿಆರ್/2008–09, ದಿನಾಂಕ:17–08–2010**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್

ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:–**
ಅಬಕಾರಿ ಉಪ ನಿರೀಕ್ಷಕರು(2)
ಮಂಗಳೂರು ಉತ್ತರ ವಲಯ–1
ಮಂಗಳೂರು.

**ಆರೋಪಿ ಹಾಗೂ ವಾಹನದ ಮಾಲೀಕ**
ಚಂದ್ರ ಮ್ಯೊಲಿ 3 8 ವರ್ಷ,
ಬಿನ್: ಕುಮಾರ ಮ್ಯೊಲಿ
ಯು.ಬಿ ಬಿಯರ್ ಫ್ಯಾಕ್ಟರಿ ಎದುರುಗಡೆ,
ಸೈಟ್ ನಂ:23, ಕುಡುಂಬೂರು,
ಮೂಡುಮನೆ,ಬೈಕಂಪಾಡಿ, ಮಂಗಳೂರು.

**ಪ್ರಕರಣದ ಮುಖ್ಯಾಂಶಗಳು:–**

ಅಬಕಾರಿ ಉಪ ನಿರೀಕ್ಷಕರು(2) ಮತ್ತು ಅಬಕಾರಿ ನಿರೀಕ್ಷಕರು ,ಮಂಗಳೂರು ಉತ್ತರ ವಲಯ–1 ರವರೊಂದಿಗೆ ದಿ: 26–11–2008ರಂದು ರಾತ್ರಿ ಸುಮಾರು 9–30 ಗಂಟೆ ಸಮಯಕ್ಕೆ ರಸ್ತೆಗಾವಲು ನಡೆಸುತ್ತಿದ್ದ ಸಂದರ್ಭದಲ್ಲಿ ಮಂಗಳೂರು ತಾಲೂಕು ಬೈಕಂಪಾಡಿ ಗ್ರಾಮದ ರೈಲ್ವೆ ಓವರ್ ಬಿಡ್ಜ್ ಬಳಿ ಓರ್ವ ವ್ಯಕ್ತಿ ದ್ವಿಚಕ್ರ ವಾಹನವನ್ನು ಅನುಮಾನಸ್ಪದವಾಗಿ ಚಲಾಯಿಸಿಕೊಂಡು ಬರುವುದನ್ನು ಕಂಡು ಅತನನ್ನು ತಡೆದು ನಿಲ್ಲಿಸಲು ಸೂಚನೆ ನೀಡಿದಾಗ ಅತನು ತನ್ನ ವಾಹನವನ್ನು ವೇಗವಾಗಿ ಚಲಾಯಿಸಲು ಪ್ರಯತ್ನಿಸಿರುವುದನ್ನು ಕಂಡು ಸಿಬ್ಬಂದಿಗಳು ಆತನನ್ನು ಸುತ್ತುವರಿದು ವಾಹನವನ್ನು ನಿಲ್ಲಿಸಲಾಗಿ ಸದ್ರಿ ವಾಹನವು ಹೊಂಡಾ ಆಕ್ಟಿವಾ ನೊಂದಣಿ ಸಂ:KA-19-S-5780 ದ್ವಿಚಕ್ರ ವಾಹನವಾಗಿದ್ದು, ಚಾಲಕನು ಕಾಲಿಡುವ ಜಾಗದಲ್ಲಿ ಒಂದು ಪ್ಲಾಸ್ಟಿಕ್ ಗೋಣಿ ಚೀಲದಲ್ಲಿ ಮದ್ಯ ತುಂಬಿರುವ ಸೀಸೆಗಳು ಇರುವುದು ಕಂಡು ಬಂದು, ಸದ್ರಿ ಮದ್ಯವನ್ನು ಹೊಂದಿರುವ ಬಗ್ಗೆ ರಹದಾರಿ ಯಾ ದಾಖಲೆಗಳು ಇದೆಯೇ ಎಂದು ಸದ್ರಿ ದ್ವಿಚಕ್ರ ವಾಹನ ಚಾಲಕನಾದ ಚಂದ್ರ ಮ್ಯೊಲಿ ಎಂಬ ವ್ಯಕ್ತಿಯನ್ನು ಪ್ರಶ್ನಿಸಲಾಗಿ ಯಾವುದೇ ಅಧಿಕೃತ ದಾಖಲೆಗಳಾಗಲೀ ಪರವಾನಿಗೆಯಾಗಲೀ ಇಲ್ಲವೆಂದು ತಿಳಿಸಿದ ಮೇರೆಗೆ, ವಾಹನವನ್ನು ಪರಿಶೀಲಿಸಲು ಮಾನ್ಯ ನ್ಯಾಯಾಲಯದ ಸರ್ಚ್ ವಾರೆಂಟನ್ನು ಪಡೆಯವರೇ ಕಾಲವಕಾಶವಿಲ್ಲದ ಕಾರಣ ಸ್ಥಳದಲ್ಲಿಯೇ ಸರ್ಚ್ ಮೆಮೋವನ್ನು ತಯಾರಿಸಿ ಗೋಣಿ ಚೀಲವನ್ನು ಪರಿಶೀಲಿಸಿದಾಗ ಅದರಲ್ಲಿ 180 ಎಂಎಲ್‌ನ 30 ಸೀಸೆಗಳಲ್ಲಿ ಒಟ್ಟು 5.400 ಲೀಟರು ನಂ.1 ಹೈವೇ ವಿಸ್ಕಿ ಮದ್ಯ ಇರುವುದನ್ನು ಪತ್ತೆಹಚ್ಚಿ, ಅಕ್ರಮವಾಗಿ ಮದ್ಯವನ್ನು ವಾಹನದಲ್ಲಿ ಸಾಗಾಟ ಮಾಡಿರುವುದನ್ನು ಖಾತ್ರಿ ಪಡಿಸಿಕೊಂಡು, ಇದು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 14ರಂತೆ ಅಪರಾಧವಾಗಿದ್ದು ಹಾಗೂ 34 ಮತ್ತು 38(ಎ)ರ ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ, ವಾಹನ ಮತ್ತು ಮದ್ಯವನ್ನು ಜಪ್ತುಪಡಿಸಿಕೊಂಡು, ಜಪ್ತು ಪಡಿಸಿದ 30 ಬಾಟ್ಲಿ ಮದ್ಯದಿಂದ

ರಾಸಾಯನಿಕ ವಿಶ್ಲೇಷಣೆ ಗಾಗಿ ಮಾದರಿಗಳನ್ನು ತೆಗೆದು ಸೀಲು ಮಾಡಿ ಸ್ಥಳದಲ್ಲಿಯೇ ಮಹಜರು ತಯಾರಿಸಿ, ಆರೋಪಿಯಾದ ಚಂದ್ರ ಮೈೂಲಿ, 38 ವರ್ಷ, ಬಿನ್ ಕುಮಾರ, ಮ್ಯೊಲಿ, ಯು.ಬಿ. ಬಿಯರ್ ಫ್ಯಾಕ್ಟರಿ ಎದುರುಗಡೆ, ಸಿ.ಎಸ್.ಲಾಂಡರಿ ಹತ್ತಿರ, ಕುಡುಂಬೂರು ಮೂಡುಮನೆ, ಬೈಕಂಪಾಡಿ, ಮಂಗಳೂರು ಇವರ ವಿರುದ್ದ ತಕ್ಷೀರು ಸಂಖ್ಯೆ:11/2008–09, ದಿ:26–11–2008ರಂದು ಮೊಕದ್ದಮೆಯನ್ನು ದಾಖಲಿಸಿಕೊಂಡು, ಜಪ್ತು ಪಡಿಸಿದ ಸೊತ್ತುಗಳನ್ನು ಅಂತಿಮ ವರದಿ ಸಲ್ಲಿಸುವ ತನಕ ತಮ್ಮ ವಶದಲ್ಲಿಯೇ ಇಟ್ಟುಕೊಳ್ಳಲು ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ.ಜಿಲ್ಲೆ, ಮಂಗಳೂರು ಇವರಲ್ಲಿ ಅನುಮತಿಯನ್ನು ಕೋರಿದ ಮೇರೆಗೆ ದಿ:4–12–2008ರಂದು ಅನುಮತಿಯನ್ನು ನೀಡಲಾಗಿರುತ್ತದೆ.

**ಜಪ್ತುಪಡಿಸಿಕೊಳ್ಳಲಾದ ಸೊತ್ತುಗಳು:–**

1) ಹೊಂಡಾ ಆಕ್ಟಿವಾ ದ್ವಿಚಕ್ರ ವಾಹನ ಸಂ: KA-19-S-5780

2) ಒಂದು ಪ್ಲಾಸ್ಟಿಕ್ ಗೋಣಿ ಚೀಲದಲ್ಲಿ 180 ಎಂ ಎಲ್ ನ ನಂ.1 ಹೈವೇ ವಿಸ್ಕಿಯ ಬಾಟಲಿಗಳು–30

(ಸದ್ರಿ ಮದ್ಯದಿಂದ 180 ಎಂ ಎಲ್ ನ 2 ಬಾಟಲಿಗಳನ್ನು ರಾಸಾಯನಿಕ ಪರೀಕ್ಷೆಗಾಗಿ ಮಾದರಿ ತೆಗೆಯಲಾಗಿದೆ)

ಮೊಕದ್ದಮೆಯ ತನಿಖೆಯನ್ನು ಕೈಗೊಂಡ ಅಬಕಾರಿ ಉಪ ನಿರೀಕ್ಷಕರು(2), ಮಂಗಳೂರು ಉತ್ತರ ವಲಯ–1 ಮಂಗಳೂರು ಇವರು ದಿ:01–01–2009ರ ವರದಿಯೊಂದಿಗೆ ಸದ್ರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನದ ಬಿ ರಿಜಿಸ್ಟ್ರಾರ್ ಎಕ್ಸ್‌ಟ್ರಾಕ್ಟ್ ವರದಿಯ ಪ್ರತಿಯನ್ನು ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಮತ್ತು ದಿನಾಂಕ:23 –1–2009ರ ವರದಿಯೊಂದಿಗೆ ಮದ್ಯದ ರಾಸಾಯನಿಕ ವಿಶ್ಲೇಷಣಾ ವರದಿ ಪ್ರತಿ ಪ್ರಾಧಿಕಾರಕ್ಕೆ ಸಲ್ಲಿಸಿ, ಜಪ್ತುಪಡಿಸಿ ಕೊಳ್ಳಲಾದ ವಾಹನದ ಮುಟ್ಟುಗೋಲು ಪ್ರಕ್ರಿಯೆಯನ್ನು ಕಾಯ್ದಿರಿಸಿ, ಉಳಿದ ಸೊತ್ತುಗಳಾದ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಶಿಫಾರಸ್ಸು ಮಾಡಿರುತ್ತಾರೆ. ತನಿಖಾಧಿಕಾರಿಗಳು ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ಪಡೆದು ಸಲ್ಲಿಸಿದ್ದ ಬಿ ಎಕ್ಸ್‌ಟ್ರಾಕ್ಟ್ ವರದಿಯ ಪ್ರಕಾರ ಶ್ರೀ.ಚಂದ್ರ ಮ್ಯೊಲಿ, ಬಿನ್ ಕುಮಾರ ಮ್ಯೊಲಿ, ಸೈಟ್ ನಂ:23, ಕುಡುಂಬೂರು ಕಾಲೋನಿ, ಮೂಡುಮನೆ, ಬೈಕಂಪಾಡಿ,ಮಂಗಳೂರು ಇವರು ದಿನಾಂಕ:27–9–2004ರಿಂದ ಅನ್ವಯವಾಗುವಂತೆ ವಶಪಡಿಸಿಕೊಳ್ಳಲಾದ KA-19-S-5780 ರ ನೊಂದಣಿ ಸಂಖ್ಯೆಯ ಹೊಂಡಾ ಆಕ್ಟಿವಾ ಇದರ ನೊಂದಣಿ ಮಾಲೀಕರಾಗಿರುವುದಾಗಿ ದೃಡಪಟ್ಟಿರುವುದರಿಂದ, ಸದ್ರಿ ವಾಹನದ ಮಾಲೀಕ/ ಪ್ರಕರಣದ ಆರೋಪಿತ ವ್ಯಕ್ತಿಗೆ ಜಪ್ತುಪಡಿಸಿದ ವಾಹನ ಮತ್ತು ಸೊತ್ತುಗಳನ್ನು ಯಾಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬ ಬಗ್ಗೆ ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43 ಬಿ ರಡಿಯಲ್ಲಿ ದಿ:15–1–2009ರಂದು ಕಾರಣ ಕೇಳಿ ನೋಟೀಸನ್ನು ನೀಡಲಾಗಿದ್ದು, ಸದ್ರಿ ಕಾರಣ ಕೇಳಿ ನೋಟಿಸನ್ನು ವಾಹನದ ಮಾಲೀಕರಿಗೆ ವ್ಯಾಪ್ತಿಯ ಅಬಕಾರಿ ನಿರೀಕ್ಷಕರ ಮುಖಾಂತರ ಜಾರಿ ಮಾಡಿಸಿ, ದಿ:23–1–2009ರಂದು ವರದಿ ಈ ಪ್ರಾಧಿಕಾರದಲ್ಲಿ ಸ್ವೀಕೃತವಾಗಿರುತ್ತದೆ. ತನಿಖಾದಿಕಾರಿಗಳ ಶಿಪಾರಸ್ಸು ವರದಿಯ ಮೇರೆಗೆ ಪ್ರಕರಣದಲ್ಲಿ ಜಪ್ತುಪಡಿಸಿಕೊಳ್ಳಲಾದ ವಾಹನದ ಮುಟ್ಟುಗೋಲು ಪ್ರಕ್ರಿಯೆಯನ್ನು ಕಾಯ್ದಿರಿಸಿ ಉಳಿದ ಸೊತ್ತುಗಳಾದ 5.400ಲೀ ಮದ್ಯ(ಮಾದರಿಗಳನ್ನು ಹೊರತುಪಡಿಸಿ)ವನ್ನು ದಿನಾಂಕ:31–1–2009ರ ಆದೇಶದಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಆದೇಶಿಸಲಾಗಿರುತ್ತದೆ.

ಜಪ್ತುಪಡಿಸಿಕೊಂಡ ದ್ವಿಚಕ್ರ ವಾಹನ ಸಂ:KA-19-S-5780 ಹೊಂಡಾ ಆಕ್ಟಿವಾ ಇದರ ನೊಂದಾಣಿ ಮಾಲೀಕರೆಂದು ಹೇಳಿಕೊಂಡ ಶ್ರೀ.ಚಂದ್ರ ಮ್ಯೊಲಿ, ಬಿನ್ ಕುಮಾರ ಮ್ಯೊಲಿ, ಸೈಟ್ ನಂ:23, ಕುಡುಂಬೂರು ಕಾಲೋನಿ, ಮೂಡುಮನೆ, ಬೈಕಂಪಾಡಿ, ಮಂಗಳೂರು ಇವರು ಈ ಪ್ರಾಧಿಕಾರದಿಂದ ಹೊರಡಿಸಿದ ಕಾರಣ ಕೇಳಿ ನೋಟಿಸಿಗೆ ದಿ:30–1–2009ರಂದು ಉತ್ತರವನ್ನು ನೀಡುತ್ತಾ, ಹೊರಿಸಲಾದ ಆರೋಪವನ್ನು ನಿರಾಕರಿಸಿ ವಾಹನವನ್ನು ಬಿಡುಗಡೆಗೊಳಿಸುವಂತೆ ಕೋರಿರುತ್ತಾರೆ. ಹಾಗೂ ಸದ್ರಿ ಉತ್ತರದ ಜೊತೆಯಲ್ಲಿಯೇ ವಾಹನದ ಮಧ್ಯಂತರ ಬಿಡುಗಡೆಗಾಗಿ ತಮ್ಮ ವಕೀಲರ ಮೂಲಕ ಅರ್ಜಿ ಸಲ್ಲಿಸಿರುತ್ತಾರೆ. ಸದ್ರಿಯವರ ವಾಹನದ ಮಧ್ಯಂತರ ಬಿಡುಗಡೆ ಕೋರಿ ಸಲ್ಲಿಸಿದ್ದ ಅರ್ಜಿಯ ವಿಚಾರಣೆ ಕೈಗೊಂಡು ಈ ಪ್ರಾಧಿಕಾರದಿಂದ ದಿ:24–4–2009ರಂದು ಹೊರಡಿಸಿದ ಆದೇಶದಲ್ಲಿ ವಾಹನದ ಮಾಲೀಕರ ಮನವಿಯನ್ನು ಪುರಸ್ಕರಿಸಿ ವಾಹನ ಸಂ:KA-19-S-5780 ಹೊಂಡಾ ಆಕ್ಟಿವಾ ದ್ವಿಚಕ್ರ ವಾಹನಕ್ಕೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ದ.ಕ ಜಿಲ್ಲೆ ಮಂಗಳೂರು ಇವರು ನೀಡಿದ ಮೌಲ್ಯ ಮಾಪನ ವರದಿಯಲ್ಲಿ ನಮೂದಿಸಿರುವ ಮೌಲ್ಯದಂತೆ ರೂ.10,000/– ಮೊತ್ತದ ಬ್ಯಾಂಕ್ ಗ್ಯಾರೆಂಟಿ ಒದಗಿಸುವ ಹಾಗೂ ಇತರೆ ಷರತ್ತುಗಳಿಗೆ ಅನುಗುಣವಾಗಿ ಮಧ್ಯಂತರ ಬಿಡುಗಡೆಗೊಳಿಸಿ ಆದೇಶಿಸಲಾಗಿರುತ್ತದೆ.ಸದ್ರಿ ಆದೇಶದ ಪ್ರಕಾರ ವಾಹನದ ಮಾಲೀಕರು ರೂ.10,000/– ಮೊತ್ತದ ಬ್ಯಾಂಕ್ ಗ್ಯಾರೆಂಟಿ ಯನ್ನು ಕೆನರಾ ಬ್ಯಾಂಕ್, ಹಳೆಯಂಗಡಿ ಶಾಖೆ ಇಲ್ಲಿಂದ ಪಡೆದು ಪ್ರಾಧಿಕಾರಕ್ಕೆ ಒಪ್ಪಿಸಿದ ಮೇರೆಗೆ, ವಾಹನವನ್ನು ವಾಹನದ ಮಾಲೀಕರ ಸುಪರ್ಧಿಗೆ ಮಧ್ಯಂತರ ಬಿಡುಗಡೆಗೊಳಿಸಲಾಗಿರುತ್ತದೆ. ವಾಹನದ ಮಾಲೀಕರು ಮಧ್ಯಂತರ ಬಿಡುಗಡೆ ಪಡೆದುಕೊಂಡ ಸಂದರ್ಭದಲ್ಲಿ ಭದ್ರತೆಯಾಗಿ ನೀಡಿರುವ ಬ್ಯಾಂಕ್ ಗ್ಯಾರೆಂಟಿಯ ಮಾನ್ಯತೆ ಅವಧಿಯು ದಿ:19–4–2012ರವರೆಗೆ ಊರ್ಜಿತದಲ್ಲಿರುತ್ತದೆ.

ನಂತರ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ ಪ್ರಕರಣದ ಪಿರ್ಯಾದುದಾರರು ಹಾಗೂ ತನಿಖಾಧಿಕಾರಿಗಳಾದ ಶ್ರೀ ಸತೀಶ್ ಕುಮಾರ್, ಅಬಕಾರಿ ಉಪ ನಿರೀಕ್ಷಕರು(2) ಮತ್ತು ಪ್ರಕರಣದಲ್ಲಿ ಮಾದರಿ ಸೀಸೆಗಳನ್ನು ರಸಾಯನಿಕ ವಿಶ್ಲೇಷಕರಲ್ಲಿಗೆ ಕೊಂಡೊಯ್ದು ವಿಶ್ಲೇಷಣಾ ವರದಿ ಪಡೆದುಕೊಂಡ ಬಗ್ಗೆ ಅಬಕಾರಿ ರಕ್ಷಕರಾದ ಶ್ರೀ.ಸುರೇಂದ್ರ ಇವರು ಪ್ರಾಸಿಕ್ಯೂಶನ್ ಸಾಕ್ಷಿದಾರರಾಗಿ ಹಾಗೂ ಪ್ರಕರಣದಲ್ಲಿ ರಕ್ಷಣಾ ಸಾಕ್ಷಿದಾರರಾದ ಶ್ರೀ. ಚಂದ್ರ ಮ್ಯೊಲಿ ಇವರು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷ್ಯವನ್ನು ನೀಡಿರುತ್ತಾರೆ.

ಅಭಿಯೋಗದ ಪರ ಸಾಕ್ಷಿ ಹಾಗೂ ರಕ್ಷಣಾ ಪರ ರಕ್ಷಣಾ ಸಾಕ್ಷಿ ವಿಚಾರಣೆಯನ್ನು ನಡೆಸಿ, ಅಭಿಯೋಗದ ಪರ ವಾದ ಆಲಿಸಿ, ಪ್ರಾಧಿಕಾರಕ್ಕೆ ಸಲ್ಲಿಸಿರುವ ದಾಖಲಾತಿಗಳು, ಪ್ರಾಸಿಕ್ಯೂಶನ್ ಪರ ನೀಡಿರುವ ಸಾಕ್ಷಿಗಳ ಹೇಳಿಕೆಗಳನ್ನು ಪರಿಶೀಲಿಸಿ ಮುಂದಿನ ಆದೇಶ ಹೊರಡಿಸುವ ಮುನ್ನ ಈ ಕೆಳಕಂಡ ವಿವಾದಾಂಶಗಳಿಗೆ ಉತ್ತರವನ್ನು ಪಡೆಯಬೇಕಾಗಿರುತ್ತದೆ.

**ವಿವಾದಾಂಶಗಳು**

1) ದಿನಾಂಕ:26–11–2008 ರಂದು ದ್ವಿಚಕ್ರ ವಾಹನ ಸಂ:KA-19-S-5780 ಹೊಂಡಾ ಆಕ್ಟಿವಾ ಇದರಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿದೆಯೇ? ಮತ್ತು ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ ಮತ್ತು ನಿಯಮಗಳ ರೀತ್ಯಾ ಅಪರಾಧಕ್ಕೆ ಬಳಸಲಾಗಿದೆಯೇ?

2) ವಶಪಡಿಸಿಕೊಂಡಿರುವ ವಾಹನದ ಮಾಲೀಕರು ತಾನೆಂದು, ತನಗೆ ತಿಳಿಯದೇ ಕರ್ನಾಟಕ ಅಬಕಾರಿ ಕಾಯಿದೆಯಡಿ ಅಕ್ರಮ ಮದ್ಯವನ್ನು ಸಾಗಾಣಿಕೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ವಾಹನದ ಮಾಲೀಕರು ಸಾಬೀತು ಪಡಿಸಿದ್ದಾರೆಯೇ? ಅಥವಾ ಇಲ್ಲವೇ?

3 ) ಜಪ್ತು ಪಡಿಸಲಾಗಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ಅಥವಾ ಇಲ್ಲವೇ?

ಒಂದನೇ ಅಂಶವನ್ನು ಗುಣಾತ್ಮಕವಾಗಿ,ಎರಡನೇ ಅಂಶವನ್ನು ನಕರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ–1:–**

ಶ್ರೀ.ಸತೀಶ್ ಕುಮಾರ್,ಅಬಕಾರಿ ಉಪ ನಿರೀಕ್ಷಕರು, ಮಂಗಳೂರು ಉತ್ತರ ವಲಯ–1 ಇವರು ದಿ:29–12–2009ರಂದು ಈ ಪ್ರಾದಿಕಾರದ ಮುಂದೆ ಹಾಜರಾಗಿ ಸಾಕ್ಷಿ ನುಡಿಯುತ್ತಾ, ತಾನು 2006 ಜೂನ್ ತಿಂಗಳಿಂದ ಅಬಕಾರಿ ಉಪ ನಿರೀಕ್ಷಕನಾಗಿ ಮಂಗಳೂರು ಉತ್ತರ ವಲಯ–1 ಇಲ್ಲಿ ಕರ್ತವ್ಯ ನಿರ್ವಹಿಸುತ್ತಿರುವುದಾಗಿಯೂ, ದಿ: 26–11–2008ರಂದು ಅಬಕಾರಿ ಅಕ್ರಮ ತಡೆಗಟ್ಟುವ ಬಗ್ಗೆ ರಸ್ತೆಗಸ್ತು ನಡೆಸುತ್ತಿದ್ದ ಸಮಯದಲ್ಲಿ ರಾತ್ರಿ ಸುಮಾರು 9–30 ಗಂಟೆ ಸಮಯಕ್ಕೆ ಮಂಗಳೂರು ತಾಲೂಕು ಬೈಕಂಪಾಡಿ ಗ್ರಾಮದ ರೈಲ್ವೆ ಓವರ್ ಬ್ರಿಡ್ಜ್‌ನ ಬಳಿಯಲ್ಲಿ ಒಂದು ದ್ವಿಚಕ್ರ ವಾಹನದಲ್ಲಿ ಒಬ್ಬ ಅಸಾಮಿಯು ಸಂಶಯಸ್ಪದವಾಗಿ ವಾಹನ ಚಲಾಯಿಸುತ್ತಿರುವುದನ್ನು ಕಂಡು ಅತನನ್ನು ತಡೆದು ನಿಲ್ಲಿಸಲು ಪ್ರಯತ್ನಿಸಿದಾಗ ಆತನು ಬೈಕಂಪಾಡಿ ಕೈಗಾರಿಕಾ ಪ್ರದೇಶದ ಕಡೆಗೆ ವಾಹನವನ್ನು ವೇಗವಾಗಿ ಚಲಾಯಿಸಿದನು. ಇದನ್ನು ಸಂಶಯಗೊಂಡ ತಾವುಗಳು ವಾಹನ ವನ್ನು ಬೆನ್ನಟ್ಟಿ ದಾರಿಯಲ್ಲಿ ತಡೆದು ನಿಲ್ಲಿಸಿದಾಗ ಸದ್ರಿ ವಾಹನ ಬೂದು ಬಣ್ಣದ ಹೊಂಡಾ ಆಕ್ಟಿವಾ ಆಗಿದು ನೊಂದಾಣಿ ಸಂ: KA-19-S-5780 ಎಂಬುದಾಗಿ ಕಂಡು ಬಂದಿದ್ದು, ಸವಾರನು ಕಾಲಿಡುವ ಜಾಗದಲ್ಲಿ ಒಂದು ಪ್ಲಾಸ್ಟಿಕ್ ಚೀಲದಲ್ಲಿ ಕೆಲವೊಂದು ಮದ್ಯದ ಬಾಟಲಿಗಳಿರುವುದು ಕಂಡು ಬಂದು, ವಾಹನವನ್ನು ಸೂಕ್ಷ್ಮವಾಗಿ ಪರಿಶೀಲಿಸಲು ಮಾನ್ಯ ನ್ಯಾಯಾಲಯದಿಂದ ಸರ್ಚ್ ವಾರೆಂಟನ್ನು ಪಡೆಯುವರೇ ಕಾಲವಾಕಾಶವಿಲ್ಲದ ಹಾಗೂ ಸಾಕ್ಷ್ಯ ಮರೆಮಾಚುವ ಸಾಧ್ಯವಿರುವುದರಿಂದ ಕರ್ನಾಟಕ ಅಬಕಾರಿ ಕಾಯಿದೆ 1965ರ ನಿಯಮ 54 ರಂತೆ ಸರ್ಚ್ ಮೆಮೋ ತಯಾರಿಸಿ ಪಂಚರಿಗಾಗಿ ಸ್ಥಳದಲ್ಲಿಯೇ ಹುಡುಕಾಟ ನಡೆಸಲಾಗಿ ರಾತ್ರಿಯಾಗಿರುವುದರಿಂದ ಪಂಚರಾಗಿ ಯಾರೂ ದೊರಕದ ಕಾರಣ ಇಲಾಖೆಯವರನ್ನೇ ಪಂಚರನ್ನಾಗಿರಿಸಿಕೊಂಡು ವಾಹನವನ್ನು ಶೋಧನೆ ಮಾಡಲಾಗಿ ಸವಾರನು ಕಾಲಿಡುವ ಜಾಗದಲ್ಲಿ ಪ್ಲಾಸ್ಟಿಕ್ ಚೀಲದಲ್ಲಿ 180 ಎಂ ಎಲ್ ನ 30 ಸೀಸೆಗಳಲ್ಲಿ ನಂ:1 ಹೈವೇ ವಿಸ್ಕಿ ಎಂಬ ಲೇಬಲ್ ಇರುವ ಮದ್ಯ ತುಂಬಿದ್ದ ಸೀಸೆಗಳು ಪತ್ತೆಯಾಗಿದ್ದು, ಸದ್ರಿ ಮದ್ಯವನ್ನು ಸಾಗಾಟ ಮಾಡಲು ಯಾವುದೇ ಅದಿಕೃತ ದಾಖಲೆಗಳು ಇದೆಯೋ ಎಂದು ಸವಾರನಲ್ಲಿ ಕೇಳಲಾಗಿ ಅದು ಯಾವುದು ತಮ್ಮಲ್ಲಿ ಇಲ್ಲವೆಂದು ತಿಳಿಸಿದ್ದು ಆತನ ಹೆಸರು ಮತ್ತು ವಿಳಾಸ ಕೇಳಲಾಗಿ ತನ್ನ ಹೆಸರು ಚಂದ್ರ ಮೈಲಿ ಬಿನ್:ಕುಮಾರ ಮೊಲಿ ಯು.ಬಿ ಪ್ಯಾಕ್ಟರಿ ಹತ್ತಿರ , ಕುಡುಂಬೂರು ಮಂಗಳೂರು ಎಂದು ತಿಳಿಸಿರುತ್ತಾರೆ. ನಂತರ ಈ ರೀತಿ ಯಾವುದೇ ದಾಖಲೆ ಇಲ್ಲದೇ ಮದ್ಯವನ್ನು ಸಾಗಾಟ ಮಾಡುವುದು ಅಬಕಾರಿ ಕಾಯಿದೆ ಪ್ರಕಾರ ಶಿಕ್ಷಾರ್ಹವಾದ ಅಪರಾಧ ಎಂದು ತಿಳಿಸಿ, ದೊರೆತ ಮದ್ಯದಿಂದ 180 ಎಂಎಲ್‌ನ 2 ಸೀಸೆಗಳಿಗೆ ಇಲಾಖಾ ಮೊಹರು ಮಾಡಿ ರಾಸಾಯನಿಕ ವಿಶ್ಲೇಷಣೆಗೆ ತೆಗೆದಿರಿಸಲಾಯಿತು. ನಂತರ ಸ್ಥಳದಲ್ಲಿಯೇ ವಿವರವಾದ ಮಹಜರನ್ನು ತಯಾರಿಸಲಾಯಿತು. ಮೂಲ ಮಹಜರನ್ನು ಮಾನ್ಯ ಜೆ.ಎಂ.ಎಫ್ ಸಿ ನ್ಯಾಯಾಲಯಕ್ಕೆ ನಿವೇದಿಸಿಕೊಂಡಿದ್ದು, ಸದ್ರಿ ಮಹಜರಿನ ಯಥಾ ಪ್ರತಿಯನ್ನು ಈಗ ನೋಡುತ್ತಿದ್ದು ಅದನ್ನು ನಿಶಾನೆ ಪಿ–1 ಎಂದು ಗುರುತಿಸಲಾಯಿತು. ನಂತರ ಆರೋಪಿ ಸಮೇತ ಕಛೇರಿಗೆ ಬಂದು ಕಛೇರಿಯಲ್ಲಿ ಆರೋಪಿಯ ವಿರುದ್ದ ಪ್ರಥಮ ಮಾಹಿತಿ ವರದಿಯನ್ನು ತಯಾರಿಸಿರುತ್ತೇನೆ. ತಯಾರಿಸಲಾದ ಪ್ರ.ಮಾ. ವರದಿಯ ಪ್ರತಿಯನ್ನು ನೋಡಿ ನಿಶಾನೆ ಪಿ–2 ಎಂದು ,ಅದರ ಮೇಲಿನ ಸಹಿಯನ್ನು ನಿಶಾನೆ ಪಿ–2ಎ ಎಂದು ಗುರುತಿಸಲಾಯಿತು. ತಯಾರಿಸಿದ ಪ್ರ.ಮಾ.ವರದಿಯೊಂದಿಗೆ ಹಾಗೂ ಇತರ ಸಾಕ್ಷಿಗಳೊಂದಿಗೆ ಆರೋಪಿಯನ್ನು ಸಂಬಂಧಪಟ್ಟ ಮಾನ್ಯ ನ್ಯಾಯಾಲಯಕ್ಕೆ ಹಾಜರು ಪಡಿಸಿರುತ್ತೇನೆ.ಈ ಬಗ್ಗೆ ಒಂದು ವಿವರವಾದ ವರದಿಯನ್ನು ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಪ್ ಎಕ್ಸೈಜ್,ದ.ಕ ಜಿಲ್ಲೆ ಇವರಿಗೆ ನಿವೇದಿಸಿಕೊಂಡಿದ್ದು ತಯಾರಿಸಿದ ವರದಿಯನ್ನು ನೋಡಿ ನಿಶಾನೆ ಪಿ–3 ಎಂದು,ಅದರ ಮೇಲಿನ ಸಹಿಯನ್ನು ನಿಶಾನೆ–ಪಿ 3ಎ ಎಂದು ಗುರುತಿಸಿರುತ್ತೇನೆ. ಅಮಾನತ್ತುಪಡಿಸಿಕೊಂಡ ಮದ್ಯದ ಮಾದರಿ ಬಾಟಲಿಗಳನ್ನು ಕೋರಿಕೆ ಪತ್ರದೊಂದಿಗೆ ಕಚೇರಿ ಸಿಬ್ಬಂದಿ ಜೊತೆ ರಾಸಾಯನಿಕ ವಿಶ್ಲೇಷಣೆ ಕಛೇರಿ,ಮಂಗಳೂರು ಇಲ್ಲಿಗೆ ಕಳುಹಿಸಿಕೊಟ್ಟು, ವಿಶ್ಲೇಷಣೆ ಮಾಡಿದ ನಂತರ ನೀಡಿದ ವರದಿಯನ್ನು ರಾಸಾಯನಿಕ ವಿಶ್ಲೇಷಣಾ ಕಛೇರಿಯಿಂದ ಪಡೆದುಕೊಂಡಿದ್ದು, ಸದ್ರಿ ವರದಿಯ ಯಥಾ ಪ್ರತಿಯನ್ನು ನೋಡಿ ನಿಶಾನೆ ಪಿ–4 ಎಂದು,ಅದರ ಮೇಲಿನ ಸಹಿಯನ್ನು ನಿಶಾನೆ ಪಿ–4ಎ ಎಂದು ಗುರುತಿಸಿರುತ್ತೇನೆ. ವಾಹನದ ಮಾಲೀಕರ ಬಗ್ಗೆ ಸಂಬಂಧಪಟ್ಟ ಪ್ರಾ.ಸಾ ಅಧಿಕಾರಿಗಳ ಕಛೇರಿಗೆ ವಾಹನದ ಬಿ ವಹಿ ವರದಿಗಾಗಿ ನಿವೇದಿಸಿಕೊಂಡೆನು. ಸದ್ರಿ ಬಿ ವರದಿಯನ್ನು ನೋಡಿ ನಿಶಾನೆ ಪಿ–5 ಎಂದು ಗುರುತಿಸಲಾಯಿತು. ಅಮಾನತುಪಡಿಸಿದ ವಾಹನದ ಮೌಲ್ಯ ಮಾಪನವನ್ನು ತಾನು ಪ್ರಾ.ಸಾ.ಅ ರವರಿಂದ ಮಾಡಿಸಿರುತ್ತೇನೆ. ಸದ್ರಿ ವರದಿ ಈಗ ನೋಡುತ್ತಿದ್ದು ಅದನ್ನು ನಿಶಾನೆ ಪಿ–6 ಎಂದು ಗುರುತಿಸಲಾಯಿತು. ಈ ಬಗ್ಗೆ ತಾನು ವಿವರವಾದ ತನಿಖೆ ನಡೆಸಿ ಜೆ.ಎಂ.ಎಫ್ .ಸಿ ನ್ಯಾಯಾಲಯದಲ್ಲಿ ಕಲಂ 34ರ ಕರ್ನಾಟಕ ಅಬಕಾರಿ ಕಾಯಿದೆ ಅಡಿ ದೋಷರೋಪಣಾ ಪಟ್ಟಿಯನ್ನು ಸಲ್ಲಿಸಿರುತ್ತೇನೆ.ತಾನು ವಶಪಡಿಸಿದ ವಸ್ತು ಹಾಗೂ ಆರೋಪಿಯನ್ನು ನೋಡಿದರೆ ಗುರುತಿಸುತ್ತೇನೆ. ಆರೋಪಿಯು ಸದ್ರಿ ವಾಹನವನ್ನು ಅಬಕಾರಿ ಕಾಯಿದೆಯಡಿ ಅಪರಾಧ ಎಸಗಲು ಬಳಸಿರುವುದು ತನ್ನ ತನಿಖೆಯಲ್ಲಿ ಸ್ಪಷ್ಟವಾಗಿರುತ್ತದೆ.

ಪಾಟೀ ಸವಾಲು: ರಕ್ಷಣಾ ಪರ ವಕೀಲರಾದ ಶ್ರೀ.ಬಿ.ಕುಮಾರ್ ಇವರ ಪಾಟೀ ಸವಾಲಿಗೆ ಸಾಕ್ಷಿದಾರರು ಉತ್ತರಿಸುತ್ತಾ ತನಗೆ ಆರೋಪಿ ಈ ಪ್ರಕರಣ ದಾಖಲಾಗಿರುವುದರಿಂದ ಪರಿಚಯವಾಗಿರುತ್ತಾರೆ, ಅವರು ಪಿ.ಎಫ್‌ನಲ್ಲಿ ಕಾರ್ಮಿಕರಾಗಿದ್ದು, ಮತ್ತು ಕುಡುಂಬೂರು ಎಂಬಲ್ಲಿ ಸಣ್ಣ ಫಾಸ್ಟ್‌ಫುಡ್ ಹೋಟೆಲ್ ಉದ್ಯಮಿ ಎಂದರೆ ತನಗೆ ತಿಳಿದಿಲ್ಲ. ಕುಡುಂಬೂರು ಎಂಬ ಸ್ಥಳವು ಬೈಕಂಪಾಡಿ ರೈಲ್ವೆ ಓವರ್ ಬಿಡ್ಜ್‌ನಿಂದ ಸುಮಾರು ಒಂದೂವರೆ ಕಿ.ಮಿ

ದೂರದಲ್ಲಿರುತ್ತದೆ. ಬೈಕಂಪಾಡಿ ಯಿಂದ ಕುಡುಂಬೂರಿಗೆ ಹೋಗಲು ರಾಷ್ಟ್ರೀಯ ಹೆದ್ದಾರಿ 17ರಲ್ಲಿ ರೈಲ್ವೆ ಬ್ರಿಡ್ಜ್ ದಾಟಲೇಬೇಕು ಎಂದರೆ ಸರಿಯಲ್ಲ, ತಾನು ಸದ್ರಿ ಆರೋಪಿಯು ಬೈಕಂಪಾಡಿ ಓವರ್ ಬ್ರಿಡ್ಜ್‌ನಿಂದ ಇಂಡಸ್ಟ್ರಿಯಲ್ ಏರಿಯಾ ಕಡೆ ಅತೀ ವೇಗವಾಗಿ ಹೋಗುತ್ತಿದ್ದ ಎಂದು ಪ್ರಥಮವಾಗಿ ಹೋಗುತ್ತಿದ್ದೇನೆ ಎಂದರೆ ಸರಿಯಲ್ಲ, ಸದ್ರಿ ವಿಷಯವನ್ನು ಮಹಜರಿನಲ್ಲಿ ಉಲ್ಲೇಖಿಸಿಲ್ಲ ಎಂದರೆ ಸರಿಯಲ್ಲ, ತಾವು ಸದ್ರಿ ಆರೋಪಿಯವರ ಮನೆಯವರನ್ನು ಹಾಗೂ ನೆರೆಕೆರೆಯ ಗಣ್ಯರನ್ನು ತಾವು ಸ್ಥಳ ಮಹಜರು ತಯಾರಿಸಿ ಆರೋಪಿ ವಶಕ್ಕೆ ತೆಗೆದುಕೊಂಡ ನಂತರ ಸಂಪರ್ಕಿಸಿರುತ್ತೇನೆ. ತಾವು ಆರೋಪಿಯಿಂದ ವಶಪಡಿಸಿದ ಅಕ್ರಮಗಳಿಗೆ ಸಂಬಂಧಿಸಿ ತಯಾರಿಸಿದ ಸ್ಥಳ ಮಹಜರಿಗೆ ಆರೋಪಿಯ ಸಹಿ ಪಡೆದಿಲ್ಲ ಮತ್ತು ಸದ್ರಿ ಮಹಜರು ಪ್ರತಿ ಅವರಿಗೆ ನೀಡಿ ಸಹಿ ಪಡೆದಿರುವುದಿಲ್ಲ,ತಾವು ಈ ಸ್ಥಳ ಮಹಜರು ಮತ್ತು ಅಕ್ರಮ ಸೊತ್ತು ವಶಪಡಿಸುವ ಪೂರ್ವದಲ್ಲಿ ಸ್ಥಳೀಯರ ಪಂಚರನ್ನು ಬರಮಾಡಿಕೊಳ್ಳಲು ಪ್ರಯತ್ನಿಸಿರುತ್ತೇನೆ, ತಾವು ಸ್ಥಳದಲ್ಲಿ ತಯಾರಿಸಿದ ಸರ್ಚ್ ಮೆಮೋಗೆ ಸ್ಥಳೀಯ ಯಾವುದೇ ಪಂಚರ ಸಹಿಯನ್ನು ಪಡೆದಿರುವುದಿಲ್ಲ. ಆ ಸರ್ಚ್ ಮೆಮೋಗೆ ಆರೋಪಿಯ ಸಹಿಯನ್ನು ಪಡೆದಿರುವುದಿಲ್ಲ, ನಾವು ಅ ದಿವಸ ಗಸ್ತು ಕಾರ್ಯದ ಬಗ್ಗೆ ತಮ್ಮ ಕಛೇರಿಯನ್ನು ಮಧ್ಯಾಹ್ನ 4–30 ಗಂಟೆಗೆ ಬಿಟ್ಟಿರುತ್ತೇವೆ, ತಾವು ಇಲಾಖಾ ಜೀಪಿನಲ್ಲಿ ರಸ್ತೆ ಗಾವಲು ಕಾರ್ಯಕ್ಕೆ ಹೋಗಿರುತ್ತೇವೆ,ತಮ್ಮ ಇಲಾಖಾ ಜೀಪನ್ನು ತಮ್ಮ ಇಲಾಖಾ ಸರ್ಕಾರಿ ಕಾರ್ಯಕ್ಕೆ ತೆರಳಿದಾಗ ಸದ್ರಿ ವಾಹನವು ಸಾಗಿ ಬಂದ ಮಾಹಿತಿಗಳು ಆ ದಿವಸದ ಲಾಗ್ ಬುಕ್ ನಲ್ಲಿ ಬರೆಯುವುದು ತಾನು ತಿಳಿದಿರುತ್ತೇನೆ. ತನ್ನ ಕಛೇರಿಯಲ್ಲಿ ತಮ್ಮ ಮೇಲಾಧಿಕಾರಿ ಅಬಕಾರಿ ನಿರೀಕ್ಷಕರು ವಿ.ಎಸ್.ಗುಂಡು ಇವರು ಇರುತ್ತಾರೆ,ಈ ಪ್ರಕರಣದಲ್ಲಿ ಪ್ರಕರಣ ಪತ್ತೆಹಚ್ಚುವ, ಅಧಿಕಾರಿ ತಾನೇ ಅಗಿದ್ದು,ತನಿಖಾಧಿಕಾರಿಯೂ ತಾನೇ ಅಗಿರುತ್ತೇನೆ. ಈ ಕೇಸನ್ನು ತಾನು ವೈಯಕ್ತಿಕ ನೆಲೆಯಲ್ಲಿ ಮತ್ತು ಆರೋಪಿ ವಿರುದ್ಧ ಉದ್ದೇಶ ಪೂರ್ವಕವಾಗಿ ಒಂದು ಸುಳ್ಳು ಮೊಕದ್ದಮೆ ದಾಖಲಿಸಿದ್ದೇನೆ ಎಂದರೆ ಸರಿಯಲ್ಲ. ಪ್ರಕರಣದಲ್ಲಿ ವಶಪಡಿಸಲಾದ ದ್ವಿಚಕ್ರ ಸ್ಕೂಟರ್ ವಾಹನವನ್ನು ಆರೋಪಿಯವರ ಪಾಸ್ಟ್‌ಫುಡ್ ಹೋಟೆಲ್‌ನ ಎದುರಿನಿಂದ ನನ್ನ ಸಿಬ್ಬಂದಿಯನ್ನು ಕಳುಹಿಸಿಕೊಟ್ಟು ವಾಹನವನ್ನು ಪಡೆದು ಕೊಂಡಿರುತ್ತೇನೆ ಎಂದರೆ ಸರಿಯಲ್ಲ, ಈ ವಾಹನವನ್ನು ತಾವು ಶೋಧನೆಗೆ ಒಳಪಡಿಸುವ ಪೂರ್ವದಲ್ಲಿ ಸುಮಾರು 5 ನಿಮಿಷ ಮುಂಚಿತವಾಗಿ ಆ ಸ್ಥಳಕ್ಕೆ ತಲುಪಿರುತ್ತೇವೆ. ತಾವು ಅ ದಿವಸ ಅಪರಾಧ ಸ್ಥಳಕ್ಕೆ ಮಂಗಳೂರು ಮಹಾನಗರ ಕಡೆಯಿಂದ ಹೋಗಿರುತ್ತೇನೆ. ತಾವು ಆರೋಪಿಯಿಂದ ವಶಪಡಿಸಿದ ದ್ವಿಚಕ್ರ ವಾಹನದ ಹಾಗೂ ಅಕ್ರಮ ಮದ್ಯವನ್ನು ಎಲ್ಲಿಂದ ತರಲಾಗಿದೆ ಎಂಬುದರ ಬಗ್ಗೆ ಪರಿಶೀಲಿಸಿರುತ್ತೇನೆ. ಸದ್ರಿ ವಾಹನದಲ್ಲಿ ಆರೋಪಿ ವಾಹನದ ಸವಾರನು ಕಾಲಿಡುವ ಜಾಗದಲ್ಲಿ ಮುಂಭಾಗದ ಸ್ಥಳದಲ್ಲಿ ಇರಿಸಿದ್ದು ಮಹಜರಿನಲ್ಲಿ ತಿಳಿಸಿದ್ದು, ಸದ್ರಿ ಕಾಲಿಡುವ ಜಾಗದಲ್ಲಿ ಎಡಬಲ ಎಂಬುದರ ಸ್ಥಳದಲ್ಲಿ ಇರಿಸಲು ಅವಕಾಶವಿಲ್ಲ ಎಂದರೆ ಸರಿಯಲ್ಲ, ತಾವು ಜಪ್ತಿಪಡಿಸಿದ 180 ಎಂ ಎಲ್ ನ 30 ಮದ್ಯದ ಬಾಟಲಿಗಳಿಂದ ಕೇವಲ 2 ಬಾಟಲಿಗಳನ್ನು ಮಾತ್ರ ರಾಸಾಯನಿಕ ವಿಶ್ಲೇಷಣೆಗೆ ತೆಗೆದಿರುತ್ತೇವೆ ಈ ಪ್ರಕರಣಕ್ಕೆ ಸಂಬಂಧಿಸಿ ತಯಾರಿಸಿರುವ ಮಹಜರು ಸರ್ಚ್ ಮೆಮೋ ಸೊತ್ತು ಜಪ್ತು ಪಡಿಸಿದ ವರದಿಗಳನ್ನು ತನ್ನ ಬರಹದಲ್ಲಿ ಬರೆದಿಲ್ಲ ಎಂದರೆ ಸರಿಯಲ್ಲ, ತಾನು ಅಪರಾಧ ಸ್ಥಳದಲ್ಲಿ ಸುಮಾರು 1ಗಂಟೆ 10 ನಿಮಿಷದ ಅವಧಿಯಲ್ಲಿ ಕಾರ್ಯನಿರತನಾಗಿರುತ್ತೇನೆ. 1 ಗಂಟೆ 10 ನಿಮಿಷ ಅವಧಿಯಲ್ಲಿ ತಾವು ಇದ್ದ ಅಪರಾಧ ಸ್ಥಳದ ಸಮೀಪದಲ್ಲಿ ಬೇರೆ ಯಾವೊಬ್ಬರೂ ಹಾದು ಹೋಗಿರುವುದಿಲ್ಲ ಕುಡುಂಬೂರು ಎಂಬ ಪರಿಸರದ ಸಮೀಪ ಇರುವ ಇಂಡಸ್ಟ್ರೀಯಲ್ ಪ್ರಾಧಿಕಾರದ ವಠಾರಗಳ ನಿವೇಶನಗಳು ಕೂಡಿರುತ್ತದೆ. ಸದ್ರಿ ಕೈಗಾರಿಕಾ ಪ್ರದೇಶದ ಕೈಗಾರಿಕಾ ಘಟಕದಲ್ಲಿ ರಾತ್ರಿ ಹಗಲು ಕೆಲಸ ಮಾಡುವ ಬಗ್ಗೆ ತನಗೆ ತಿಳಿದಿರುವುದಿಲ್ಲ. ಕುಡುಂಬೂರು ಕಾಲನಿಯಲ್ಲಿ ತುಂಬಾ ಮನೆಗಳು ಇರಬಹುದು. ತನಗೆ ಹೆಸರು ಬರಬೇಕು ಎಂದು ತಾನು ಸುಳ್ಳು ಕೇಸು ಹಾಕಿರುತ್ತೇನೆ ಎಂದರೆ ಸರಿಯಲ್ಲ, ತಾನು ಹೇಳಿದಂತೆ ಯಾವುದೇ ಘಟನೆ ನಡೆದಿಲ್ಲ ಎಂದರೆ ಸರಿಯಲ್ಲ,ಸದ್ರಿ ಪರಿಸರದಲ್ಲಿ ಅಕ್ರಮ ಮದ್ಯ ಮಾರಾಟ ಕುರಿತು ಸ್ಥಳೀಯ ಸಂಘ ಸಂಸ್ಥೆ ಮತ್ತು ಸ್ತ್ರೀ ಶಕ್ತಿ ಸ್ವಸಹಾಯ ಸಂಘದವರು ಪ್ರತಿಭಟನೆ ಮಾಡಿರುವುದು ತನಗೆ ತಿಳಿದಿಲ್ಲ, ತಾನು ಈ ಪ್ರಕರಣದ ಆರೋಪಿ ಚಂದ್ರ ಮ್ಯೊಲಿ ಇವರು ಸದ್ರಿ ಪರಿಸರದಲ್ಲಿ ಅಕ್ರಮ ಮದ್ಯ ಮಾಡುತ್ತಿದ್ದನ್ನು ತಾನು ಗಮನಿಸಲಿಲ್ಲ, ಆವ್ಯಾಪ್ತಿಯ ಜನರ ಮನವೊಲಿಸಲು ಚಂದ್ರ ಮ್ಯೊಲಿರವರ ಮೇಲೆ ಸುಳ್ಳು ಕೇಸು ಹಾಕಿರುತ್ತೇನೆ ಎಂದರೆ ಸರಿಯಲ್ಲ ಎಂದು ಪಾಟೀ ಸವಾಲಿಗೆ ಉತ್ತರ ನೀಡಿರುತ್ತಾರೆ.

**ಪ್ರಾ.ಸಾ–2:–**

ಶ್ರೀ.ಸುರೇಂದ್ರ ಅಬಕಾರಿ ರಕ್ಷಕ, ಮಂಗಳೂರು ಉತ್ತರ ವಲಯ ಇವರು ದಿ:29–12–2009 ರಂದು ಈ ಪ್ರಾಧಿಕಾರದ ಮುಂದೆ ಸಾಕ್ಷಿ ನೀಡುತ್ತಾ, ತಾನು ಮಂಗಳೂರು ಉತ್ತರ ವಲಯ–1 ಅಬಕಾರಿ ನಿರೀಕ್ಷಕರ ಕಚೇರಿಯಲ್ಲಿ ಕಳೆದ 5 ವರ್ಷಗಳಿಂದ ಅಬಕಾರಿ ರಕ್ಷಕನಾಗಿ ಕರ್ತವ್ಯ ನಿರ್ವಹಿಸುತ್ತಿದ್ದೇನೆ. ಈ ಪ್ರಕರಣಕ್ಕೆ ಸಂಬಂಧಿಸಿದಂತೆ ದಿ: 5–12–2008ರಂದು ತಮ್ಮ ಮೇಲಾಧಿಕಾರಿ ಅಬಕಾರಿ ಉಪ ನಿರೀಕ್ಷಕರು, ಶ್ರೀ.ಸತೀಶ್ ಕುಮಾರ್‌ರವರು ಈ ಪ್ರಕರಣದಲ್ಲಿ ಅಮಾನತುಪಡಿಸಿದ ಮದ್ಯದ ಮಾದರಿ ಬಾಟಲಿಯನ್ನು ರಾಸಾಯನಿಕ ವಿಶ್ಲೇಷಣೆ ಕಚೇರಿ ಮಂಗಳೂರು ಇಲ್ಲಿಗೆ ಕೊಂಡು ಹೋಗಲು ಕೋರಿಕೆ ಪತ್ರದೊಂದಿಗೆ ತನಗೆ ಆದೇಶಿಸಿರುತ್ತಾರೆ. ಆ ಪ್ರಕಾರ ದಿ:5–12–2008ರಂದು ಕೋರಿಕೆ ಪತ್ರದೊಂದಿಗೆ ಮಾದರಿ ಬಾಟಲನ್ನು ರಾಸಾಯನಿಕ ವಿಶ್ಲೇಷಣಾ ಕಛೇರಿ ಮಂಗಳೂರು ಇಲ್ಲಿಗೆ ಕೊಂಡು ಹೋಗಿ ಒಪ್ಪಿಸಿರುತ್ತೇನೆ. ದಿ:15–1–2009ರಂದು ಪುನ: ರಾಸಾಯನಿಕ ವಿಶ್ಲೇಷಣಾ ಕಛೇರಿಗೆ ತೆರಳಿ ರಾಸಾಯನಿಕ ವಿಶ್ಲೇಷಣೆ ವರದಿ ಮತ್ತು ವಿಶ್ಲೇಷಿಸಿದ ಸೀಸೆಯನ್ನು ವಾಪಾಸು ತಂದು ತಮ್ಮ ಕಛೇರಿಗೆ ಒಪ್ಪಿಸಿರುತ್ತೇನೆ ಎಂದು ಸಾಕ್ಷಿ ನುಡಿದಿರುತ್ತಾರೆ.

**ಪಾಟೀ ಸವಾಲು:**

ಶ್ರೀ.ಬಿ.ಕುಮಾರ್ ವಕೀಲರು ಇವರ ಪಾಟೀ ಸವಾಲಿಗೆ ಉತ್ತರಿಸುತ್ತಾ ತಾನು ಯಾವ ಕೇಸಿನ ಬಾಬ್ತು ಯಾವ ದಿವಸ,ಯಾವ ದಿನಾಂಕದಂದು ಕೊಂಡು ಹೋಗಿದ್ದೇನೆ. ಯಾವ ದಿನಾಂಕದಂದು ರಾಸಾಯನಿಕ ವಿಶ್ಲೇಷಣೆಯ ವರದಿ ತಂದು ಕಛೇರಿಗೆ ಒಪ್ಪಿಸಿರುತ್ತೇನೆ ಎಂದು ಕೋರ್ಟಿನ ಮುಂದಿರುವ ದಾಖಲೆಗಳಿಂದ ಕಂಡು ಬರುವುದಿಲ್ಲ ಎಂದರೆ ಸರಿಯಲ್ಲ, ತಾನು ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆ ಎಂದರೆ ಸರಿಯಲ್ಲ ಎಂದು ಪಾಟೀ ಸವಾಲಿಗೆ ಉತ್ತರಿಸಿರುತ್ತಾರೆ.

**ಡಿಡಬ್ಲ್ಯೂ–1:–**

ಶ್ರೀ.ಚಂದ್ರ ಮ್ಯೊಲಿ ,ಬಿನ್:ಕುಮಾರ ಮ್ಯೊಲಿ ಬೈಕಂಪಾಡಿ, ಮಂಗಳೂರು ಇವರು ದಿನಾಂಕ: 3–8–2010ರಂದು ಈ ಪ್ರಾಧಿಕಾರದ ಮುಂದೆ ರಕ್ಷಣಾ ಸಾಕ್ಷಿ ನುಡಿಯುತ್ತಾ ತಾನು ಕುಡುಂಬೂರಿನಲ್ಲಿ ಹೋಟೆಲ್ ನಡೆಸುತ್ತಾ ಇದ್ದೇನೆ. ಸದ್ರಿ ಅಂಗಡಿಯನ್ನು ಬೆಳಿಗ್ಗೆ 11ರಿಂದ 3–00 ಗಂಟೆ ಸಂಜೆ 6ರಿಂದ 11 ಗಂಟೆಯತನಕ ನಡೆಸುತ್ತೇನೆ. ಆ ಹೋಟೆಲ್‌ನ್ನು ತಾನೇ ನಡೆಸುತ್ತಿದ್ದೇನೆ. ತನಗೆ ಇನ್‌ಪೆಕ್ಟರ್ ಸತೀಶ್ ರವರು ನೋಡಿ ಗುರುತು ಇದೆ. ಅವರು ಸಬ್ ಇನ್ಸ್ ಪೆಕ್ಟರಾಗಿದ್ದಾರೆ ಕುಡುಂಬೂರು ಪ್ರದೇಶದಲ್ಲಿ ಮದ್ಯ ವ್ಯಾಪಾರ ಮಾಡುತ್ತಾರೆಂದು ಸ್ತ್ರೀ ಸಂಘಟನೆಯವರು ಪ್ರತಿಭಟನೆ ಮಾಡಿರುತ್ತಾರೆ. ತನ್ನ ಹೋಟೆಲಿಗೆ ಈ ಕೇಸಿಗೆ ಮೊದಲು ಅಬಕಾರಿ ಇಲಾಖೆಯವರು ಬರುತ್ತ ಇದ್ದರು, ಸತೀಶ್ ಅ.ಉ .ನಿ ಅವರು ಈ ಮೊಕದ್ದಮೆ ದಾಖಲಿಸುವ 6 ತಿಂಗಳ ಮೊದಲು ಬೇರೆ ಮದ್ಯ ಹಿಡಿದ ಕೇಸಿಗೆ ಸಾಕ್ಷಿ ಹಾಕಬೇಕೆಂದು ಕೇಳಿದ್ದಕ್ಕೆ ತಾನು ತನ್ನ ಹೋಟೆಲು ಬಿಟ್ಟು ತಾನು ಸಾಕ್ಷಿಗೆ ಸಹಿ ಹಾಕಲಾಗುವುದಿಲ್ಲ ತನಗೆ ಕೋರ್ಟು ಕಚೇರಿಗೆ ತಿರುಗಲು ತನ್ನಿಂದ ಸಾಧ್ಯವಿಲ್ಲವೆಂದು ಹೇಳಿ ತಾನು ಸಹಿ ಮಾಡಲು ತಿರಸ್ಕರಿಸಿರುತ್ತೇನೆ. ಅದಕ್ಕೆ ಅವರು ನೀನು ಸಹಿ ಮಾಡಬೇಕೆಂದು ಇಲ್ಲದಿದ್ದರೆ ನಿನ್ನನ್ನು ಕಳುಹಿಸುತ್ತೆನೆಂದು ಹೇಳಿ ಹೋದರು. ತಾನು ಸಹಿ ಹಾಕಿರಲಿಲ್ಲ.ತಾನು ಹೋಟೆಲಿಗೆ ಬೇಕಾದ ಸಾಮಾನನ್ನು ತರಲು ಮಾರ್ಕೆಟಿಗೆ ತನ್ನ ಆಕ್ಟಿವಾ ಹೊಂಡಾ ಸ್ಕೂಟರಿನಲ್ಲಿ ಹೋಗಿ ತರುತ್ತಿರುತ್ತೇನೆ. ತಮ್ಮ ಹೋಟೆಲಿನ ಸೈಡಿನಲ್ಲಿ ಆ ಸ್ಕೂಟರನ್ನು ಯಾವಾಗಲೂ ನಿಲ್ಲಿಸಿರುತ್ತೇನೆ. ನನ್ನ ಹೋಟೆಲಿನಲ್ಲಿ ನಿಲ್ಲಿಸಿದ ಸ್ಕೂಟರನ್ನು ಎಕ್ಸೈಜ್ ರವರು ಕೊಂಡು ಹೋಗಿದ್ದಾರೆಂದು ತನಗೆ ತಿಳಿದು ಬಂತು. ಆ ಸ್ಕೂಟರಿನಲ್ಲಿ ಮದ್ಯವನ್ನು ಸಾಗಿಸುತ್ತಿದ್ದೇನೆಂದು ಸುಳ್ಳು ಕೇಸು ದಾಖಲಿಸಿರುತ್ತಾರೆ. ತಾನು ಯಾವಾಗಲೂ ತನ್ನ ಸ್ಕೂಟರಿನಲ್ಲಿ ಮದ್ಯವನ್ನು ಸಾಗಿಸಲಿಲ್ಲ. ದಿ:26–11–08 ರಂದು 9–3 0 ರಾತ್ರಿ ಸಮಯ ಮಂಗಳೂರು ತಾಲೂಕು ಬೈಕಂಪಾಡಿ ಗ್ರಾಮ ದ ರೈಲ್ವೆ ಓವರ್ ಬ್ರಿಡ್ಜ್ ನ ಬಳಿ ಆಕ್ಟಿವಾ ಹೊಂಡಾ ಸಂ: KA-19-S-5780ರಲ್ಲಿ ಮದ್ಯ ಸಾಗಿಸುತ್ತಿದ್ದಾರೆಂದು ಅಬಕಾರಿ ಉಪ ನಿರೀಕ್ಷಕರವರು ಹಾಕಿದಂತ ಮೊಕದ್ದಮೆಯು ಸುಳ್ಳಾಗಿರುತ್ತದೆಂದು ತಾನು ಹೇಳುತ್ತೇನೆ. ಹಾಗೆ ತಾನು ನಿರಪರಾಧಿ ಮತ್ತು ಯಾವುದೇ ತಪ್ಪು ಮಾಡದ ಕಾರಣ ತನ್ನ ಸ್ಕೂಟರನ್ನು ತನಗೆ ಬಿಡುಗಡೆಗೊಳಿಸಿ ಕೊಡಬೇಕಾಗಿ ಪ್ರಾರ್ಥಿಸುತ್ತೇನೆ ಎಂದು ರಕ್ಷಣಾ ಸಾಕ್ಷಿ ನುಡಿದಿರುತ್ತಾರೆ.

**ಪಾಟೀ ಸವಾಲು:–**

ರಕ್ಷಣಾ ಸಾಕ್ಷಿದಾರರನ್ನು ಅಭಿಯೋಗ ನಿರ್ದೇಶಕರು ಪಾಟೀ ಸವಾಲು ನಡೆಸಲಾಗಿ ತಾನು ಕಳೆದ 5 ವರ್ಷಗಳಿಂದ ಕುಡುಂಬೂರಿನಲ್ಲಿ ಹೋಟೆಲ್ ನಡೆಸುತ್ತಾ ಇದ್ದೇನೆ. ತಾನು ಪಾಸ್ಟ್ ಪುಡ್ ಹೋಟೆಲ್‌ನಲ್ಲಿ ಚಿಕನ್ ಕಬಾಬ್ ಮತ್ತು ಪ್ರೈಡ್ ರೈಸ್: ಇತರ ಮಾಂಸಾಹಾರಿ ಪದಾರ್ಥವನ್ನು ಗ್ರಾಹಕರಿಗೆ ಒದಗಿಸುತ್ತೇನೆ. ಸಾಮಾನ್ಯವಾಗಿ ಮದ್ಯ ಸೇವನೆ ಮಾಡುವವರು ಕೋಳಿ, ಕಬಾಬ್ ಹಾಗೂ ಇತರ ಕೋಳಿ ಖಾದ್ಯ ಸೇವಿಸುತ್ತಾರೆ. ತನ್ನ ಹೋಟೆಲ್‌ನಿಂದ ಪಾಸ್ಟ್‌ಪುಡ್ ಅಂದರೆ ಚಿಕನ್ ಕಬಾಬ್ ಇತ್ಯಾದಿ ಕೊಂಡು ಹೋಗಿ ಹತ್ತಿರದ ಮದ್ಯದಂಗಡಿಯಿಂದ ಮದ್ಯ ಕೂಡ ಖರೀದಿಸಿರ್ತಾರೆ. ಈ ಪ್ರಕರಣಕ್ಕೆ ಮೊದಲು ಅಬಕಾರಿ ಸಬ್‌ಇನ್ಸ್ ಪಕ್ಟರ್ ಸತೀಶ್ ರವರು ತನ್ನಲ್ಲಿ ಬೇರೆ ಕೇಸಿಗೆ ಸಹಿ ಮಾಡಲು ಎರಡು ಸಲ ಕೇಳಿರುತ್ತಾರೆ. ಅದರೆ ತಾನು ಒಮ್ಮೆ ಕೂಡಾ ಸಹಿ ಹಾಕಿರುವುದಿಲ್ಲ. ತನ್ನದಲ್ಲದೆ ಬೇರೆ ಯಾರಾನ್ನಾದರೂ ಬೇರೆ ಕೇಸುಗಳಿಗೆ ಸಹಿ ಹಾಕಲು ಅಬಕಾರಿ ಉಪ ನಿರೀಕ್ಷಕರಾದ ಸತೀಶ್ ಕುಮಾರ್ ಕೇಳಿ ಕೊಂಡಿದ್ದಾರೆಯೇ ಎಂಬ ಬಗ್ಗೆ ತನಗೆ ಗೊತ್ತಿಲ್ಲ, ತನ್ನ ಆಕ್ಟಿವಾ ಹೊಂಡಾವನ್ನು ತನ್ನ ಹೋಟೆಲಿನ ಬದಿಯಲ್ಲಿ ರಾತ್ರಿ 7–00 ಗಂಟೆಗೆ ಇಟ್ಟಿರುತ್ತೇನೆ.ತನಗೆ ಅದೇ ದಿನ ರಾತ್ರಿ 8–00 ಗಂಟೆಗೆ ತನ್ನ ವಾಹನವನ್ನು ಅಬಕಾರಿ ಇಲಾಖೆಯವರು ಕೊಂಡು ಹೋದ ವಿಷಯ ಗೊತ್ತಾಯಿತು. ಅದರೆ ವಾಹನ ಕೊಂಡು ಹೋಗುವ ಸಂದರ್ಭ ತಾನು ತನ್ನ ಹೋಟೆಲ್ ನಲ್ಲಿ ಇರಲಿಲ್ಲ, ತನ್ನ ಹೋಟೆಲಿನ ಬದಿಯಿಂದ ಆಕ್ಟಿವಾ ಹೊಂಡಾ ಕೊಂಡು ಹೋದ ಸಂದರ್ಭ ಅಲ್ಲಿದ್ದ ಯಾರಿಗೂ ಆ ವಿಷಯ ಗೊತ್ತಾಗಲಿಲ್ಲ. ಅಲ್ಲದೇ ಈ ವಿಷಯ ತನ್ನ ಪತ್ನಿಗೆ ಗೊತ್ತಿತ್ತು. ಆ ಸಮಯ ಅವಳು ಹೋಟೆಲ್‌ನಲ್ಲಿ ಇದ್ದಳು. ಅಬಕಾರಿ ಇಲಾಖೆಯವರು ತನ್ನ ವಾಹನ ಕೊಂಡು ಹೋಗುವಾಗ ತನ್ನ ಪತ್ನಿ ಅಕ್ಷೇಪಿಸಲಿಲ್ಲ, ಹಾಗೇ ತನ್ನ ಪತ್ನಿ ಅಬಕಾರಿ ಇಲಾಖೆಯಲ್ಲಿ ತನ್ನ ವಾಹನವನ್ನು ಯಾವ ಕಾರಣಕ್ಕೆ ಕೊಂಡು ಹೋಗುತ್ತೀರಿ ಎಂದು ಕೇಳಿರಲಿಲ್ಲ, ತಾನು ಹೆಚ್ಚಿನ ದಿವಸ ರಾತ್ರಿ 8–00 ಗಂಟೆಗೆ ತನ್ನ ಹೋಟೆಲ್‌ನಲ್ಲಿ ಇರುತ್ತೇನೆ. ನಾನು ಅಬಕಾರಿ ಉಪ ನಿರೀಕ್ಷಕರು ಸತೀಶ್ ರವರಲ್ಲಿ ತನ್ನ ವಾಹನವನ್ನು ಯಾವ ಕಾರಣಕ್ಕೆ ಕೊಂಡು ಹೋಗುತ್ತೀರಿ ಎಂದು ಕೇಳಿರಲಿಲ್ಲ, ಅವರು ತನ್ನ ಹೋಟೆಲ್‌ಗೆ ಒಂದೆರಡು ಸಾರಿ ಬಂದ ಕಾರಣ ಅವರ ಪರಿಚಯ ವಿತ್ತು. ದಿನಾಂಕ:26–11–2008 ರಂದು ರಾತ್ರಿ ಸುಮಾರು 9–30 ಗಂಟೆಗೆ ಮಂಗಳೂರು ತಾಲೂಕು ಬೈಕಂಪಾಡಿ ಗ್ರಾಮದ ಬೈಕಂಪಾಡಿ ರೈಲ್ವೆ ಓವರ್ ಬ್ರಿಡ್ಜ್‌ನ ಬಳಿ ತಾನು ಮೇಲೆ ಹೇಳಿದ ದ್ವಿಚಕ್ರ ವಾಹನದಲ್ಲಿ 180 ಎಂ ಎಲ್ ನ 30 ಸೀಸೆಗಳಲ್ಲಿ ನಂ:1 ಹೈವೇ ವಿಸ್ಕಿ ಎಂಬ ಲೇಬಲ್‌ವುಳ್ಳ ಮದ್ಯದ ಸೀಸೆಗಳನ್ನು ಪ್ಲಾಸ್ಟಿಕ್ ಸೀಸೆಗಳಲ್ಲಿ ತಾನು ಕಾಲಿಡುವ ಜಾಗದಲ್ಲಿ ಇಟ್ಟುಕೊಂಡು ಯಾವುದೇ ಅಧಿಕೃತ ದಾಖಲೆ ರಹದಾರಿ ಇಲ್ಲದೇ ಸಾಗಿಸುತ್ತಿದ್ದೆ ಎಂದರೆ ಸರಿಯಲ್ಲ, ಆ ಸಮಯ ಅಬಕಾರಿ ಇಲಾಖೆಯವರು ಅಬಕಾರಿ ಅಕ್ರಮ ತಡೆಗಟ್ಟುವ ಬಗ್ಗೆ ರಸ್ತೆಗಸ್ತು ನಡೆಸುತ್ತಿದ್ದ ಸಮಯ ತನ್ನ ವಾಹನವನ್ನು ತಡೆಹಿಡಿದು ನಿಲ್ಲಿಸಿ ಶೋಧನೆ ಮಾಡಿ ಅಕ್ರಮ ಮದ್ಯ ಪತ್ತೆಹಚ್ಚಿ ಸ್ಥಳದಲ್ಲಿ ಮಹಜರು ತಯಾರಿಸಿ ತನ್ನನ್ನು ಕೊಂಡು ಹೋದರು ಅಂದರೆ ಸರಿಯಲ್ಲ, ತಾನು ತನ್ನ ವಾಹನ ಬಿಡುಗಡೆಗೊಳಿಸುವ ಉದ್ದೇಶದಿಂದ ಪ್ರಾಧಿಕಾರದಲ್ಲಿ ಸುಳ್ಳು ಹೇಳುತ್ತಿದ್ದೇನೆಂದರೆ ಸರಿಯಲ್ಲ, ತನ್ನ ಹೋಟೆಲ್‌ಗೆ ಅಬಕಾರಿ ಉಪ ನಿರೀಕ್ಷಕರು ಬೇರೆ ಕೇಸಿನಲ್ಲಿ ಮಹಜರಿಗೆ ಸಹಿ ಮಾಡಬೇಕು ಎಂಬ ವಿಷಯವನ್ನು ಈ ಹಿಂದೆ ತನ್ನ ವಕೀಲರಲ್ಲಿ ಹೇಳಿರುವುದಿಲ್ಲ. ಹಾಗೆಯೇ ತಾನು ಅಬಕಾರಿ ಉಪ ನಿರೀಕ್ಷಕರು ಸತೀಶ್ ಕುಮಾರ್ ರವರ ಕೋರಿಕೆ ಮೇರೆಗೆ ಮಹಜರಿಗೆ ಸಹಿ ಮಾಡದ ಕಾರಣ ಅವರು ತನ್ನಲ್ಲಿ ಕೋಪಗೊಂಡು ತನಗೆ ಬುದ್ಧಿ ಕಲಿಸುತ್ತೇನೆಂದು ಹೇಳಿದ್ದರೆಂಬ ವಿಷಯ ಕೂಡಾ ತಾನು ಈ ಹಿಂದೆ ಹೇಳಿರುವುದಿಲ್ಲ ಎಂದು ಪಾಟೀ ಸವಾಲಿಗೆ ಉತ್ತರಿಸಿರುತ್ತಾರೆ.

ಸಾಕ್ಷಿದಾರರ ಪಾಟೀ ಸವಾಲಿಗೆ ರಕ್ಷಣಾ ವಕೀಲರು ಮರುವಿಚಾರಣೆ ನಡೆಸಲು ಅಸಕ್ತಿ ತೋರಿರುವುದಿಲ್ಲ.

ಪ್ರಕರಣದ ಎಲ್ಲಾ ದಾಖಲಾತಿಗಳನ್ನು ಮತ್ತು ಪ್ರಾ.ಸಾ–1 ಮತ್ತು 2 ಹಾಗೂ ರಕ್ಷಣಾ ಸಾಕ್ಷಿ ವಿಚಾರಣೆಯನ್ನು ಕೈಗೊಂಡು, ಸರ್ಕಾರಿ ಅಭಿಯೋಜಕರ ವಾದವನ್ನು ಆಲಿಸಿ ಮತ್ತು ಮಹಜರು ಸಾಕ್ಷಿದಾರರ ಹಾಗೂ ತನಿಖಾಧಿಕಾರಿಯವರ ವರದಿಗಳನ್ನು ಕೂಲಂಕುಷವಾಗಿ ಪರಿಶೀಲಿಸಿದಾಗ ದಿ:26–11–2008ರಂದು ಜಪ್ತು ಪಡಿಸಿರುವ ದ್ವಿಚಕ್ರ ವಾಹನ ಸಂ:KA-19-S-5780 ಹೊಂಡಾ ಆಕ್ಟಿವಾ ಸ್ಕೂಟರಿನಲ್ಲಿ 5.400ಲೀ ಮದ್ಯವನ್ನು

ಅಕ್ರಮವಾಗಿ ಸಾಗಾಟ ಮಾಡಿರುವುದನ್ನು, ಅಪರಾಧ ಸ್ಥಳದಲ್ಲಿ ಮಹಜರು ಜರುಗಿಸಿ ವಶಪಡಿಸಿ ಕೊಂಡಿದ್ದು, ಅಕ್ರಮ ಮದ್ಯವನ್ನು ದ್ವಿಚಕ್ರ ವಾಹನ ಸಂ: KA-19-S-5780 ಹೊಂಡಾ ಆಕ್ಟಿವಾ ಸ್ಕೂಟರನ್ನು ಆರೋಪಿತರಾದ ಚಂದ್ರ ಮೈಲಿ ಇವರು ಖುದ್ದು ಬಳಸಿರುವುದು ಪ್ರಾಧಿಕಾರದ ಮುಂದೆ ವಿಚಾರಣೆಗೆ ಒಳಪಟ್ಟಿರುವ ಸಾಕ್ಷ್ಯಾಧಾರಗಳಿಂದ ಸಾಭೀತಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಅಕ್ರಮ ಮದ್ಯವನ್ನು ಸಾಗಾಟ ತನ್ನ ತಿಳುವಳಿಕೆಗೆ ಬಾರದೇ ನಡೆದಿದೆ ಎಂಬುದನ್ನು ಸಾಕ್ಷ್ಯಾಧಾರಗಳೊಂದಿಗೆ ಸಾಭೀತುಪಡಿಸುವುದು ವಾಹನದ ಮಾಲೀಕರ ಆದ್ಯ ಹೊಣೆಗಾರಿಕೆಯಾಗಿರುತ್ತದೆ. ಪ್ರಕರಣದಲ್ಲಿ ಜಪ್ತುಪಡಿಸಿಕೊಂಡ ವಾಹನ ಸಂ: KA-19-S-5780 ಹೊಂಡಾ ಆಕ್ಟಿವಾ ಸ್ಕೂಟರ್ ಇದರ ಮಾಲೀಕರೇ ಖುದ್ದಾಗಿ ವಾಹನ ಚಲಾಯಿಸಿ ಬಂದು ಅವರನ್ನು ಅಪರಾಧ ಸ್ಥಳದಲ್ಲಿ ದಸ್ತಗಿರಿ ಮಾಡಲಾಗಿದ್ದು, ಪ್ರಕರಣದಲ್ಲಿ ಮುಖ್ಯ ಆರೋಪಿತ ವ್ಯಕ್ತಿಯಾಗಿದ್ದು , ಸದ್ರಿಯವರಿಗೆ ಈ ಪ್ರಾದಿಕಾರದಿಂದ ನೊಂದಣಿ ಅಂಚೆ ಮೂಲಕ ನೀಡಲಾದ ಕಾರಣ ಕೇಳಿ ನೋಟೀಸಿಗೆ ವಾಹನದ ಮಾಲೀಕರು ಉತ್ತರಿಸುತ್ತಾ ತನ್ನ ಮೇಲೆ ಹೊರಿಸಲಾದ ಆರೋಪವನ್ನು ಅಲ್ಲಗಳೆದಿರುತ್ತಾರೆ ಹೊರತು ತನ್ನ ನಿರಾಪಾದಿತ್ವನ್ನು ಸಾಭೀತುಪಡಿಸಲು ಯಾವುದೇ ಪುರಾವೆ ದಾಖಲೆಗಳನ್ನು ಪ್ರಾದಿಕಾರದಲ್ಲಿ ಒದಗಿಸಿರುವುದಿಲ್ಲ. ಹಾಗೂ ವಾಹನದ ಮಾಲೀಕರು ರಕ್ಷಣಾ ಸಾಕ್ಷಿ ನೀಡುತ್ತಾ ತನ್ನ ವಾಹನದಲ್ಲಿ ಅಕ್ರಮ ಮದ್ಯ ಸಾಗಾಟವಾದ ಬಗ್ಗೆ ಹೊರಿಸಲಾದ ಆರೋಪವನ್ನು ಅಲ್ಲಗೆಳೆಯುವ ಬಗ್ಗೆ ಮೌಖಿಕ ಹೇಳಿಕೆಗಳನ್ನು ನೀಡಿದಿರುತ್ತಾರೆ ಹೊರತು ಯಾವುದೇ ದಾಖಲಾತಿಗಳನ್ನು ಪ್ರಾದಿಕಾರದ ಮುಂದೆ ಹಾಜರು ಪಡಿಸಿರುವುದಿಲ್ಲ. ಹಾಗೂ ಅವರು ನೀಡಿರುವ ಹೇಳಿಕೆಗಳಲ್ಲಿ ಯಾವುದೇ ಸತ್ಯಾಂಶ ಕಂಡು ಬಂದಿರುವುದಿಲ್ಲ. ಕಾರಣ ವಾಹನದ ಮಾಲೀಕರು ತನ್ನ ನಿರುಪಾಧಿತ್ವವನ್ನು ಸೂಕ್ತ ದಾಖಲಾತಿಗಳೊಂದಿಗೆ ಸಾಭೀತುಪಡಿಸಲು ವಿಪಲರಾಗಿರುವುದರಿಂದ ಹಾಗೂ ಅಪರಾಧ ಸ್ಥಳದಲ್ಲಿ ವಾಹನವನ್ನು ನಿಲ್ಲಿಸಿ ತಪಾಸಣೆಗೆ ಒಳಪಡಿಸಿದ ಸಂದರ್ಭದಲ್ಲಿ ವಾಹನದ ಮಾಲೀಕರೇ ಆರೋಪಿಯಾಗಿ ದಸ್ತಗಿರಿಯಾಗಿದ್ದು, ಈ ಅಕ್ರಮವು ವಾಹನದ ಮಾಲೀಕರ ತಿಳುವಳಿಕೆಯಿಂದಲೇ ನಡೆದಿದೆ ಎಂಬುದು ಪ್ರಾದಿಕಾರಕ್ಕೆ ಮನದಟ್ಟಾಗಿರುವುದರಿಂದ ಎರಡನೆಯ ಅಂಶವನ್ನು ನಕಾರಾತ್ಮಕ ವಾಗಿ ಪರಿಗಣಿಸಿದೆ.

ಈ ಮೇಲಿನ ಎಲ್ಲಾ ಕಾರಣಗಳಿಂದ ಅಭಿಯೋಗದ ಪರ ಸಾಕ್ಷಿಗಳ ಹಾಗೂ ರಕ್ಷಣಾ ಸಾಕ್ಷಿ ವಿಚಾರಣೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ಈ ಪ್ರಕರಣದಲ್ಲಿ ಜಪ್ತು ಪಡಿಸಲಾಗಿರುವ ಹೊಂಡಾ ಆಕ್ಟಿವಾ ಸ್ಕೂಟರ್‌ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಕೊಳ್ಳಲು ಪ್ರಾಧಿಕಾರದಲ್ಲಿ ನಡೆಸಲಾದ ವಿಚಾರಣೆಯ ಸಾಕ್ಷ್ಯಾಧಾರಗಳು ಯೋಗ್ಯವೆಂದು ತೀರ್ಮಾನಿಸಿ, ಈ ಪ್ರಕರಣದಲ್ಲಿ ಜಪ್ತು ಪಡಿಸಲಾಗಿರುವ ವಾಹನ ಸಂ: KA-19-S-5780 ಹೊಂಡಾ ಆಕ್ಟಿವಾ ಸ್ಕೂಟರನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ.ಜಿಲ್ಲೆ,ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲ0 43 ಎ ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, ನಿಯಮ 43 ಬಿ ರಲ್ಲಿ ಅನುಸರಿಸ ಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಅಬಕಾರಿ ಉಪ ನಿರೀಕ್ಷಕರು (2),ಮಂಗಳೂರು ಉತ್ತರ ವಲಯ–1 ಇವರ ತಕ್ಷೀರು ಸಂ:11/2008–09, ದಿ:26–11–2008ರಲ್ಲಿ ಜಪ್ತುಪಡಿಸಿರುವ ವಾಹನ ಸಂ: KA-19-S-5780 ಹೊಂಡಾ ಆಕ್ಟಿವಾ ಸ್ಕೂಟರ (ಚಾಸೀಸ್ ನಂ:ME4JF08 5J48562146 ಮತ್ತು ಇಂಜಿನ್ ಸಂ: JF08E0 577501)ನ್ನು ನಿಯಮ 43 ಎ (2)ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಪ್ರಾಧಿಕಾರದಿಂದ ದಿ:24–4–2009ರಂದು ವಾಹನವನ್ನು ತಾತ್ಕಾಲಿಕವಾಗಿ ಮಧ್ಯಂತರ ಬಿಡುಗಡೆಗೊಳಿಸಿ ಹೊರಡಿಸಿರುವ ಆದೇಶವನ್ನು ರದ್ದುಗೊಳಿಸಿ ಆದೇಶಿಸಿದೆ. ಆರ್.ಸಿ. ಮಾಲೀಕರು ಸದರಿ ಮಧ್ಯಂತರ ಬಿಡುಗಡೆ ಹೊಂದಿರುವ ವಾಹನ ಸಂ: KA-19-S-5780 ಹೊಂಡಾ ಆಕ್ಟಿವಾ ಸ್ಕೂಟರನ್ನು ಈ ಆದೇಶದ 30 ದಿನಗಳ ಒಳಗೆ ಈ ಪ್ರಾಧಿಕಾರದ ವಶಕ್ಕೆ ಅಬಕಾರಿ ಉಪ ನಿರೀಕ್ಷಕರು (2), ಮಂಗಳೂರು ಉತ್ತರ ವಲಯ–1 ಇವರಲ್ಲಿ ಒಪ್ಪಿಸಲು ಆದೇಶಿಸಿದೆ. ತಪ್ಪಿದಲ್ಲಿ ಭದ್ರತೆಯಾಗಿ ನೀಡಿರುವ ಬ್ಯಾಂಕ್ ಗ್ಯಾರಂಟಿ ಸಂಖ್ಯೆ:4/2009, ದಿ:20–4–2009 ಕೆನರಾ ಬ್ಯಾಂಕ್, ಹಳೆಯಂಗಡಿ ಶಾಖೆ ಇದರ ಮೌಲ್ಯದ ಮೊತ್ತ ರೂ.10000/–ವನ್ನು ಸರ್ಕಾರಕ್ಕೆ ಪಡೆದು ಚಲನ್ ಮೂಲಕ ಖಜಾನೆಗೆ ಪಾವತಿಸಿಕೊಳ್ಳಲು ಆದೇಶಿಸಿದೆ. ಈ ಆದೇಶದ ಪಾಲನೆ ಬಗ್ಗೆ ಹಾಗೂ ಸದ್ರಿ ಮುಟ್ಟುಗೋಲು ಹಾಕಿಕೊಳ್ಳಲಾದ ವಾಹನವನ್ನು ಅಬಕಾರಿ ಉಪ ನಿರೀಕ್ಷಕರು (2), ಮಂಗಳೂರು ಉತ್ತರ ವಲಯ–1 ಇವರು ಈ ಪ್ರಾಧಿಕಾರದ ಪರ ಅವರ ಸ್ವಾಧೀನಕ್ಕೆ ಪಡೆದುಕೊಂಡು ಈ ಪ್ರಾಧಿಕಾರಕ್ಕೆ ವರದಿ ಒಪ್ಪಿಸಲು ಆದೇಶಿಸಿದೆ.

ಈ ಆದೇಶವನ್ನು ದಿನಾಂಕ:17–08–2010 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು

**ನೂರ್ ಮಹಮ್ಮದ್ ಹುಸೇನ್**

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,

ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–I**

ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:–

ಪ್ರಾ.ಸಾ– I : ಶ್ರೀ ಸತೀಶ್ ಕುಮಾರ್,ಅ ಉನಿ, ಮಂಗಳೂರು ಉತ್ತರ ವಲಯ–1

ಪ್ರಾ.ಸಾ–2 : ಶ್ರೀ . ಸುರೇಂದ್ರ,ಅಬಕಾರಿ ರಕ್ಷಕ,ಮಂಗಳೂರು ಉತ್ತರ ವಲಯ–1

**ಅನುಬಂಧ– II**

ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:–

ನಿಶಾನೆ ಪಿ– I : ಮಹಜರು ಪ್ರತಿ

ನಿಶಾನೆ ಪಿ– I ಎ : ಅದರ ಮೇಲಿನ ಸಹಿ

| | | |
|---|---|---|
| ನಿಶಾನೆ ಪಿ–2 | : | ಪ್ರಥಮ ಮಾಹಿತಿ ವರದಿ |
| ನಿಶಾನೆ ಪಿ–2 ಎ | : | ಅದರ ಮೇಲಿನ ಸಾಕ್ಷಿ ಸಹಿ |
| ನಿಶಾನೆ ಪಿ–3 | : | ತನಿಖಾ ವರದಿ |
| ನಿಶಾನೆ ಪಿ–3 ಎ | : | ಅದರ ಮೇಲಿನ ಸಾಕ್ಷಿ ಸಹಿ |
| ನಿಶಾನೆ ಪಿ–4 | : | ರಾಸಾಯನಿಕ ವಿಶ್ಲೇಷನಾ ವರದಿ |
| ನಿಶಾನೆ ಪಿ–4ಎ | : | ಅದರ ಮೇಲಿನ ಸಾಕ್ಷಿ ಸಹಿ |
| ನಿಶಾನೆ ಪಿ–5 | : | ಬಿ ಎಕ್ಸ್ ಟ್ರಾಕ್ಟ್ ವರದಿ |
| ನಿಶಾನೆ ಪಿ–6 | : | ಮೌಲ್ಯ ಮಾಪನ ವರದಿ |

**ಅನುಬಂಧ– III**

ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು :–

ಡಿಡಬ್ಲ್ಯೂ–1 : ಶ್ರೀ.ಚಂದ್ರ ಮ್ಯೊಲಿ ,ಬಿನ್:ಕುಮಾರ ಮ್ಯೊಲಿ,ಬೈಕಂಪಾಡಿ

**ಅನುಬಂಧ– IV**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು :– ಇಲ್ಲ–

**ನೂರ್ ಮಹಮ್ಮದ್ ಹುಸೇನ್**

ಪಿ.ಆರ್.1392

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದ.ಕ.ಜಿಲ್ಲೆ,**

**ಮಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ: ಎಸ್‌ಡಿಕೆ/151/ಡಿಟಿಸಿಆರ್/2006–07, ದಿನಾಂಕ:13 –08–2010**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್

ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**

ಅಬಕಾರಿ ಉಪ ನಿರೀಕ್ಷಕರು
ಮಂಗಳೂರು ಜಾರಿ ಮತ್ತು ತನಿಖೆ ಮಂಗಳೂರು.

**ಆರೋಪಿಗಳು**

1) ರತ್ನಾಕರ ರಾವ್, ಬಿನ್:ದಿ:ಗೋಪಾಲಕೃಷ್ಣ
ಸಲ್ಮಾರ್,ಪುತ್ತೂರು ಅಂಚೆ, ಮಂಗಳೂರು, ಪುತ್ತೂರು

2) ರಹೀಂ ಖಾನ್,ಬಿನ್:ಕರೀಮ್ ಖಾನ್,
ಉಸ್ಮಾನ್ ಹಾಜಿ ಹೌಸ್, ಚರ್ವತ್ತೂರು
ಪಯ್ಯಂಗೇರಿ,ಕೇರಳ ರಾಜ್ಯ.

**ವಾಹನದ ಮಾಲೀಕರು**

ರಮಾನಂದ,ಬಿನ್:ಬಾಬು ಪೂಜಾರಿ,
ಪಂಜಿನಡ್ಕ ಹೌಸ್ ಗರೋಡಿ ಅಂಚೆ ಮತ್ತು ಗ್ರಾಮ ಮಂಗಳೂರು

**ಪ್ರಕರಣದ ಮುಖ್ಯಾಂಶಗಳು:**

ಅಬಕಾರಿ ಉಪ ನಿರೀಕ್ಷಕರು(2), ಮಂಗಳೂರು ಉತ್ತರ ಜಾರಿ ಮತ್ತು ತನಿಖೆರವರು ದಿನಾಂಕ:14–11–2006 ರಂದು ಮುಂಜಾನೆ 5:3 0 ಗಂಟೆ ಸಮಯದಲ್ಲಿ ಮಂಗಳೂರು ನಗರ ವ್ಯಾಪ್ತಿಯ ಸುರತ್ಕಲ್– ಮಂಗಳೂರು ರಾಷ್ಟ್ರೀಯ ಹೆದ್ದಾರಿಯಲ್ಲಿ ವಾಹನಗಳಲ್ಲಿ ಅಕ್ರಮವಾಗಿ ನಕಲಿ ಮದ್ಯ ಸಾಗಾಟವಾಗುತ್ತಿದೆ ಎಂಬ ಖಚಿತ ವರ್ತಮಾನದ ಮೇರೆಗೆ ಸಿಬ್ಬಂಧಿಗಳೊಂದಿಗೆ ರಸ್ತೆಗಾವಲು ನಡೆಸುತ್ತಿದ್ದಾಗ ಸುರತ್ಕಲ್‌ನಿಂದ ರಾಷ್ಟ್ರೀಯ ಹೆದ್ದಾರಿ ನಂತೂರು ಕಡೆಗೆ ಬರುತ್ತಿದ್ದ ವಾಹನ ನೋಂದಣಿ ಸಂ: KA-19-A-987 (ಅಂಬಾಸಿಡರ್ ಕಾರು)ನ್ನು ಅನುಮಾನದಿಂದ ಪರಿಶೀಲಿಸಲು ವಾಹನವನ್ನು ತಡೆದಾಗ ಚಾಲಕನು ಕಾರನ್ನು ನಿಲ್ಲಿಸದೇ ವೇಗವಾಗಿ ಚಲಾಯಿಸಿದನು. ಅಷ್ಟರಲ್ಲಿ ಅಬಕಾರಿ ಅಧಿಕಾರಿ/ಸಿಬ್ಬಂಧಿಗಳು ಇಲಾಖಾ ವಾಹನದಲ್ಲಿ ಸದ್ರಿ ಕಾರನ್ನು ಬೆನ್ನಟ್ಟಿ ಮಂಗಳೂರು ಕದ್ರಿ ಹಿಲ್ಸ್ ಬಳಿಯ ಕರ್ನಾಟಕ ಪಾಲಿಟೆಕ್ನಿಕ್ ಎದುರು ವಾಹನವನ್ನು ನಿಲ್ಲಿಸಿದಾಗ ಅದರಲ್ಲಿದ್ದ ಚಾಲಕನು ಕಾರಿನಿಂದ ಇಳಿದು ಓಡಿದನು. ಸಿಬ್ಬಂಧಿಗಳು ಅತನನ್ನು ಬೆನ್ನಟ್ಟಿ ಹಿಡಿಯಲು ಪ್ರಯತ್ನಿಸಿದ್ದರೂ ಹಿಡಿಯಲು ಸಾಧ್ಯವಾಗದೇ ಆತನು ತಪ್ಪಿಸಿಕೊಂಡನು. ನಂತರ ನ್ಯಾಯಾಲಯದಲ್ಲಿ ಸರ್ಚ್ ವಾರೆಂಟನ್ನು ಪಡೆಯುವರೇ ಕಾಲಾವಕಾಶವಿಲ್ಲದ ಕಾರಣ ಸ್ಥಳದಲ್ಲಿಯೇ ಸರ್ಚ್ ಮೆಮೋವನ್ನು ತಯಾರಿಸಿ ಕಾರನ್ನು ಪರಿಶೀಲಿಸಿದಾಗ ಕಾರಿನ ಚಾಲಕನ ಹಿಂಭಾಗದ ಸೀಟಿನಲ್ಲಿ ಇಬ್ಬರು ವ್ಯಕ್ತಿಗಳು ಕುಳಿತಿದ್ದು,ಅವರು ತಲಾ ಒಂದೊಂದು ಕಪ್ಪು ಬ್ಯಾಗ್‌ಗಳನ್ನು ಹಿಡಿದಿರುವುದು ಕಂಡು ಬಂದು, ಸದ್ರಿ ಬ್ಯಾಗ್‌ಗಳನ್ನು ತೆರೆದು ಪರಿಶೀಲಿಸಿದಾಗ ಅವುಗಳಲ್ಲಿ 750 ಎಂಎಲ್‌ನ ಮದ್ಯ ತುಂಬಿದ ಬಾಟಲಿಗಳು ಇರುವುದು ಕಂಡು ಬಂದು, ನಂತರ ಕಾರಿನ ಹಿಂಭಾಗದ ಡಿಕ್ಕಿಯನ್ನು ನೋಡಲಾಗಿ ಅಲ್ಲಿ 12 ರಟ್ಟಿನ ಪೆಟ್ಟಿಗೆಗಳಲ್ಲಿ 750 ಎಂಎಲ್‌ನ ಮದ್ಯ ತುಂಬಿದ ಪ್ಲಾಸ್ಟಿಕ್ ಸೀಸೆಗಳು ತುಂಬಿರುವುದು ಪತ್ತೆಯಾಯಿತು. ಸದ್ರಿ ಮದ್ಯವನ್ನು ಸಾಗಾಟ ಮಾಡಲು ಅಧಿಕೃತ ರಹದಾರಿ ದಾಖಲಾತಿಗಳು ಇದೆಯೇ ಎಂದು ಹಾಗೂ ಸದ್ರಿ ಮದ್ಯವನ್ನು ಎಲ್ಲಿಗೆ ಸಾಗಿಸಲಾಗುತ್ತಿದೆ ಎಂದು ಕೇಳಲಾಗಿ ಯಾವುದೇ ದಾಖಲೆಗಳು ಇಲ್ಲದೇ ಕೇರಳ ರಾಜ್ಯಕ್ಕೆ ಸಾಗಾಟ ಮಾಡುತ್ತಿರುವುದಾಗಿ ಸದ್ರಿ

ವ್ಯಕ್ತಿಗಳು ತಿಳಿಸಿದ ಮೇರೆಗೆ, ಸದ್ರಿ ವ್ಯಕ್ತಿಗಳ ಹೆಸರು ವಿಳಾಸವನ್ನು ಪಡೆದುಕೊಂಡು ಅನಧಿಕೃತವಾಗಿ ಮದ್ಯವನ್ನು ಹೊಂದುವುದು ಮತ್ತು ಸಾಗಿಸುವುದು ಅಬಕಾರಿ ಕಾಯಿದೆ ಪ್ರಕಾರ ಶಿಕ್ಷಾರ್ಹ ಅಪರಾಧ ಎಂದು ತಿಳಿಯಪಡಿಸಿ, ಈ ಕೆಳಕಂಡಂತೆ ದೊರೆತ ಬ್ರಾಂಡ್‌ವಾರು ಮದ್ಯದಿಂದ ಒಟ್ಟು 5 ಬಾಟಲಿಗಳನ್ನು ರಾಸಾಯನಿಕ ವಿಶ್ಲೇಷಣಾ ಪರೀಕ್ಷೆಗೆ ಪ್ರತ್ಯೇಕಿಸಿ ಅವುಗಳಿಗೆ ಇಲಾಖಾ ಸೀಲು ಮಾಡಿ ,ಮಾದರಿ ಮೊಹರು ತಯಾರಿಸಿ ಆರೋಪಿಗಳ ಹೆಸರು ಮತ್ತು ವಿಳಾಸಗಳ ಗುರುತು ಚೀಟಿ ಅಂಟಿಸಿ ಕಾರನ್ನು ಸೂಕ್ಷ್ಮವಾಗಿ ಪರಿಶೀಲಿಸಲಾಗಿ, ನೊಂದಣಿ ಸಂ:KA-19-A-987 ಚಾಸೀಸ್ ಸಂ:AKW77243 9 ಹಾಗೂ ಇಂಜಿನ್ ಸಂ:175746 ಇರುವುದನ್ನು ದೃಡೀಕರಿಸಿ, ಕಾರಿನಲ್ಲಿ ಅಕ್ರಮವಾಗಿ ಮದ್ಯ ಸಾಗಾಟ ಮಾಡುವುದು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11,13,14 ರಂತೆ ಅಪರಾಧ ಹಾಗೂ 32, 34, 38(ಎ)ರ ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ, ಕಾರಿನಲ್ಲಿದ್ದ 1) ಶ್ರೀ ರತ್ನಾಕರ ರಾವ್, ಬಿನ್ :ದಿ: ಗೋಪಾಲ ಕೃಷ್ಣ, ಸಾಲ್ಮಾರ್, ಪುತ್ತೂರು ಅಂಚೆ ಮತ್ತು ತಾಲೂಕು ಹಾಗೂ 2) ರಹೀಂ ಖಾನ್, ಬಿನ್ ಕರೀಂ ಖಾನ್, ಉಸ್ಮಾನ್ ಹಾಜಿ ಹೌಸ್, ಚರ್ವತ್ತೂರು, ಪೈಯಂಗೇರಿ, ಕೇರಳ ರಾಜ್ಯ ಇವರುಗಳ ವಿರುದ್ದ ತಕ್ಷೀರು ಸಂ:12/06–07 ದಿ:14–11–2006ರಂತೆ ಮೊಕದ್ದಮೆಯನ್ನು ದಾಖಲಿಸಲಾಗಿರುತ್ತದೆ.

**ವಶಪಡಿಸಿಕೊಂಡ ಸೊತ್ತುಗಳು:–**

1. ಬಿಳಿ ಬಣ್ಣದ ಅಂಬಾಸಿಡರ್ ಕಾರು ಸಂ:KA-19-A-987
2. 750 ಎಂಎಲ್‌ನ ಪ್ಲಾಸ್ಟಿಕ್ ಬಾಟ್ಲಿಗಳಲ್ಲಿ ರೆಡ್ ಸೀಲ್ ವಿಸ್ಕಿ ಎಂಬ ಲೇಬಲ್ ಅಂಟಿಸಿರುವ 96 ಬಾಟ್ಲಿ ನಕಲಿ ಮದ್ಯ –72 ಲೀಟರ್
3. 750 ಎಂಎಲ್‌ನ ಪ್ಲಾಸ್ಟಿಕ್ ಬಾಟ್ಲಿಗಳಲ್ಲಿ ಟೋನಿಯಾ xxx ರಂ ಎಂಬ ಲೇಬಲ್ ಅಂಟಿಸಿರುವ 11 ಬಾಟ್ಲಿ ನಕಲಿ ಮದ್ಯ–8.250 ಲೀಟರ್
4. 750 ಎಂಎಲ್‌ನ ಪ್ಲಾಸ್ಟಿಕ್ ಬಾಟ್ಲಿಗಳಲ್ಲಿ ಒಕ್ಸ್‌ಫರ್ಡ್ ಕ್ಲಬ್ ವಿಸ್ಕಿ ಎಂಬ ಲೇಬಲ್ ಅಂಟಿಸಿರುವ 60 ಬಾಟ್ಲಿ ನಕಲಿ ಮದ್ಯ–45 ಲೀಟರ್
5. 750 ಎಂಎಲ್‌ನ ಪ್ಲಾಸ್ಟಿಕ್ ಬಾಟ್ಲಿಗಳಲ್ಲಿ ಗೋಲ್ಡ್‌ಕ್ವಾಸ್ಕ್ xxx ರಂ ಎಂಬ ಲೇಬಲ್ ಅಂಟಿಸಿರುವ 10 ಬಾಟ್ಲಿ ನಕಲಿ ಮದ್ಯ–7.500 ಲೀಟರ್
6. 750 ಎಂಎಲ್‌ನ ಪ್ಲಾಸ್ಟಿಕ್ ಬಾಟ್ಲಿಗಳಲ್ಲಿ ಗೋಲ್ಡನ್ ಏಸ್ ವಿಸ್ಕಿ ಎಂಬ ಲೇಬಲ್ ಅಂಟಿಸಿರುವ 63 ಬಾಟ್ಲಿ ನಕಲಿ ಮದ್ಯ–47.250 ಲೀಟರ್

**ಒಟ್ಟು 240 ಬಾಟ್ಲಿಗಳಲ್ಲಿ 180.000 ಲೀಟರ್ ನಕಲಿ ಮದ್ಯ**

ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ನಕಲಿ ಮದ್ಯದ ಮಾದರಿಗಳನ್ನು ಮೊಕದ್ದಮೆಯ ತನಿಖಾಧಿಕಾರಿಗಳು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ರಾಸಾಯನಿಕ ಪರೀಕ್ಷಾ ಫಲಿತಾಂಶದ ವರದಿಯಲ್ಲಿ ರೆಡ್‌ಸೀಲ್ ವಿಸ್ಕಿ ಎಂದು ಲೇಬಲ್ ಹೊಂದಿರುವ ಮಾದರಿಯಲ್ಲಿ ಮದ್ಯಸಾರದ ಪ್ರಮಾಣ 40.0%, ಟೋನಿಯಾ xxx ರಂ ಎಂದು ಲೇಬಲ್ ಹೊಂದಿರುವ ಮಾದರಿಯಲ್ಲಿ ಮದ್ಯಸಾರದ ಪ್ರಮಾಣ 36.0%, ಒಕ್ಸ್‌ಫರ್ಡ್ ಕ್ಲಬ್ ವಿಸ್ಕಿ ಎಂದು ಲೇಬಲ್ ಹೊಂದಿರುವ ಮಾದರಿಯಲ್ಲಿ ಮದ್ಯಸಾರದ ಪ್ರಮಾಣ 38.0%, ಗೋಲ್ಡ್‌ಕ್ವಾಸ್ಟ್ xxx ಎಂದು ಲೇಬಲ್ ಹೊಂದಿರುವ ಮಾದರಿಯಲ್ಲಿ ಮದ್ಯಸಾರದ ಪ್ರಮಾಣ 39.0%, ಗೋಲ್ಡನ್ ಏಸ್ ವಿಸ್ಕಿ ಎಂದು ಲೇಬಲ್ ಹೊಂದಿರುವ ಮಾದರಿಗಳಲ್ಲಿ ಮದ್ಯಸಾರದ ಪ್ರಮಾಣ 43.0% ಆಗಿರುವುದಾಗಿ ಮತ್ತು ವರದಿಯಲ್ಲಿ ``Sedimentary particles observed in the these samples`` ಎಂದು ದೃಢೀಕರಿಸಿರುವುದರಿಂದ ಹಾಗೂ ಜಫ್ತು ಮಾಡಿದ ಸೊತ್ತುಗಳು ತನ್ನದೆಂದು ಹೇಳಿಕೊಂಡು ಯಾರೂ ಮುಖತ: ಭೇಟಿಯಾಗದೇ ಇರುವುದು ಹಾಗೂ ಅರ್ಜಿಯನ್ನು ಸಲ್ಲಿಸದೇ ಇರುವುದರಿಂದ ಜಫ್ತು ಮಾಡಿದ ನಕಲಿ ಮದ್ಯವನ್ನು(ಮಾದರಿಯನ್ನು ಹೊರತುಪಡಿಸಿ)ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ಆದೇಶಕ್ಕಾಗಿ ದಿ:14–12–2006ರ ವರದಿಯಲ್ಲಿ ಶಿಫಾರಸ್ಸು ಮಾಡಿರುವ ಮೇರೆಗೆ ಈ ಪ್ರಾಧಿಕಾರದ ದಿನಾಂಕ:13–2–2007ರ ಆದೇಶದಲ್ಲಿ ಸದ್ರಿ ಮದ್ಯವನ್ನು ಮುಟ್ಟುಗೋಲು ಹಾಕಿಕೊಂಡು ಬಾಟಲಿಗಳ ಸಮೇತ ನಾಶಪಡಿಸಲು ಆದೇಶಿಸಿದೆ.

ವಾಹನದ ಬಿ ರಿಜಿಸ್ಟ್ರಾರ್ ಎಕ್ಸ್‌ಟ್ರಾಕ್ಟ್ ವರದಿಯ ಪ್ರತಿಯನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮಂಗಳೂರು ಇವರಿಂದ ತನಿಖಾಧಿಕಾರಿಯವರ ಮುಖಾಂತರ ಪಡೆಯಲಾಗಿದ್ದು, ಸದ್ರಿ ಬಿ ವಹಿ ವರದಿಯ ಪ್ರಕಾರ ಶ್ರೀ.ರಮಾನಂದ, ಬಿನ್:ಬಾಬು ಪೂಜಾರಿ, ಹೌಸ್ ನಂ:–193 ಗರ್ಡಾಡಿ ಹತ್ತಿರ,ಬೆಳ್ತಂಗಡಿ ತಾಲೂಕು ಇವರು ದಿನಾಂಕ:24–10–97ರಿಂದ ಅನ್ವಯವಾಗುವಂತೆ ವಶಪಡಿಸಿಕೊಳ್ಳಲಾದ ಸಂ:KA-19-A-987 ಅಂಬಾಸಿಡರ್ ಕಾರು ಇದರ ನೊಂದಣಿ ಮಾಲೀಕರಾಗಿರುವುದಾಗಿ ಹಾಗೂ ಮೆ:ರಾಶಿ ಫೈನ್ಯಾನ್ಸ್ ಸೌಕರ್ ಪೇಟೆ, ಚೆನ್ನೈ ಇವರು ಹೆಚ್.ಪಿ.ಎ ದಾರರಾಗಿವುದಾಗಿ ದೃಡಪಟ್ಟಿರುವ ಮೇರೆಗೆ ಸದ್ರಿ ವಾಹನದ ಮಾಲೀಕ/ ಪ್ರಕರಣದ ಆರೋಪಿತ ವ್ಯಕ್ತಿಗಳಿಗೆ ಹಾಗೂ ಹೆಚ್.ಪಿ.ಎ ದಾರರಿಗೆ ದಿ:22–12–2006ರಂದು ಜಪ್ತುಪಡಿಸಿದ ವಾಹನ ಮತ್ತು ಸೊತ್ತುಗಳನ್ನು ಯಾಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬ ಬಗ್ಗೆ ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43ಬಿ ರಡಿಯಲ್ಲಿ ಕಾರಣ ಕೇಳಿ ನೋಟೀಸನ್ನು ನೀಡಲಾಗಿದ್ದು, ಸದ್ರಿ ಕಾರಣ ಕೇಳಿ ನೋಟಿಸು ವಾಹನದ ಮಾಲೀಕರಿಗೆ ದಿ:27–12–2006ರಂದು ಜ್ಯಾರಿಯಾಗಿ, ಹೆಚ್.ಪಿ.ಎ ದಾರರಿಗೆ ಜ್ಯಾರಿಯಾಗದೇ ಅಂಚೆ ಷರಾದೊಂದಿಗೆ ವಾಪಸ್ಸು ಬಂದಿರುತ್ತದೆ. ಹಾಗೂ ಆರೋಪಿತ ವ್ಯಕ್ತಿಯಾದ ರತ್ನಾಕರ ರಾವ್ ಎಂಬವರಿಗೆ ದಿ:27–12–2006ರಂದು ಜಾರಿಯಾಗಿ, ಮತ್ತೊರ್ವ ವ್ಯಕ್ತಿಯಾದ ರಹೀಮ್ ಖಾನ್ ಎಂಬವರಿಗೆ ನೋಟಿಸು ಜ್ಯಾರಿಯಾಗದೇ ಅಂಚೆ ಷರಾದೊಂದಿಗೆ ವಾಪಸ್ಸು ಬಂದಿರುತ್ತದೆ. ವಾಹನದ ಮಾಲೀಕರಿಂದಾಗಲೀ ಹೆಚ್.ಪಿ.ಎ. ದಾರರಿಂದಾಗಲೀ ಪ್ರಾದಿಕಾರದಿಂದ ಕೇಳಲಾದ ಕಾರಣ ಕೇಳಿ ನೋಟಿಸಿಗೆ ಉತ್ತರ ಬಂದಿರುವುದಿಲ್ಲ.

ಜಪ್ತುಪಡಿಸಿಕೊಂಡ ವಾಹನ KA-19-A-987 ಅಂಬಾಸಿಡರ್ ಕಾರು ಇದರ ನೊಂದಾವಣಿ ಮಾಲೀಕರೆಂದು ಹೇಳಿಕೊಂಡ ಶ್ರೀ.ರಮಾನಂದ,ಬಿನ್:ಬಾಬು ಪೂಜಾರಿ, ಪಂಜಿನಂದ್ಯ ಹೌಸ್,ಗರ್ಡಾಡಿ ಅಂಚೆ ಮತ್ತು ಗ್ರಾಮ, ಬೆಳ್ತಂಗಡಿ ಇವರ ಜಿ.ಪಿ.ಎ. ದಾರರಾದ ಶ್ರೀ.ಎಂ.ಧನುಂಜಯ ಬಿನ್: ದಿ:ಗಂಗೋಜಿ ರಾವ್,ಜಾರಪ್ಪ ಸುವರ್ಣ ಕಂಪೌಂಡ್, ಭಾರತ್ ಸ್ವಾಮಿಲ್ ಎದುರುಗಡೆ,ಪಡೀಲ್ ಇವರು ವಕೀಲರ ಮೂಲಕ ಅರ್ಜಿ ಸಲ್ಲಿಸಿ, ವಾಹನದ ಮಧ್ಯಂತರ ಬಿಡುಗಡೆಗಾಗಿ ಕೋರಿರುತ್ತಾರೆ. ಸದ್ರಿಯವರು ವಾಹನದ ಮಧ್ಯಂತರ ಬಿಡುಗಡೆ ಕೋರಿ ಸಲ್ಲಿಸಿದ್ದ ಅರ್ಜಿಯ ವಿಚಾರಣೆ ಕೈಗೊಂಡು ಈ ಪ್ರಾಧಿಕಾರದಿಂದ ದಿ:4–1–2007 ರಂದು ಹೊರಡಿಸಿದ ಆದೇಶದಲ್ಲಿ ವಾಹನದ ಮಾಲೀಕರ ಮನವಿಯನ್ನು ಪುರಸ್ಕರಿಸಿ ವಾಹನ ಸಂ: KA-19-A-987 ಅಂಬಾಸಿಡರ್ ಕಾರಿಗೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ದ.ಕ ಜಿಲ್ಲೆ ಮಂಗಳೂರು ಇವರು ನೀಡಿದ

ಮೌಲ್ಯ ಮಾಪನ ವರದಿಯಲ್ಲಿ ನಮೂದಿಸಿರುವ ಮೌಲ್ಯದಂತೆ ರೂ.30,000/– ಮೊತ್ತದ ಬ್ಯಾಂಕ್ ಗ್ಯಾರೆಂಟಿ ಒದಗಿಸುವ ಹಾಗೂ ಇತರೆ ಷರತ್ತುಗಳಿಗೆ ಅನುಗುಣವಾಗಿ ಮಧ್ಯಂತರ ಬಿಡುಗಡೆಗೊಳಿಸಿ ಆದೇಶಿಸಲಾಗಿರುತ್ತದೆ. ಸದ್ರಿ ಅದೇಶದ ಪ್ರಕಾರ ವಾಹನದ ಮಾಲೀಕರು ರೂ.30,000/– ಮೊತ್ತದ ಬ್ಯಾಂಕ್ ಗ್ಯಾರೆಂಟಿ ಯನ್ನು ಕೆನರಾ ಬ್ಯಾಂಕ್,ಮಾರ್ಕೆಟ್ ರೋಡ್ ಶಾಖೆ,ಮಂಗಳೂರು ಇಲ್ಲಿಂದ ಪಡೆದು ಪ್ರಾಧಿಕಾರಕ್ಕೆ ಒಪ್ಪಿಸಿ, ವಾಹನವನ್ನು ವಾಹನದ ಮಾಲೀಕರ ಸುಪರ್ಧಿಗೆ ಮಧ್ಯಂತರ ಬಿಡುಗಡೆಗೊಳಿಸಲಾಗಿರುತ್ತದೆ. ವಾಹನದ ಮಾಲೀಕರು ಮಧ್ಯಂತರ ಬಿಡುಗಡೆ ಪಡೆದು ಕೊಂಡ ಸಂದರ್ಭದಲ್ಲಿ ಭದ್ರತೆಯಾಗಿ ನೀಡಿರುವ ಬ್ಯಾಂಕ್ ಗ್ಯಾರೆಂಟಿಯ ಮಾನ್ಯತೆ ಅವಧಿಯು ದಿ:11–1–2010ರವರೆಗೆ ಊರ್ಜಿತದಲ್ಲಿದ್ದು ನಂತರದಲ್ಲಿ ಸದ್ರಿ ಬ್ಯಾಂಕ್ ಗ್ಯಾರೆಂಟಿ ಯನ್ನು ಇನ್‌ವೋಕ್ ಮಾಡಿಕೊಂಡು ,ಅಡಕವಾಗಿರುವ ಮೊತ್ತವನ್ನು ಸರ್ಕಾರದ ಕಂದಾಯ ಠೇವಣಿ ಖಾತೆಯಲ್ಲಿ ಜಮೆ ಮಾಡಲಾಗಿರುತ್ತದೆ.

ನಂತರ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ ಪ್ರಕರಣದ ಫಿರ್ಯಾದುದಾರರು ಹಾಗೂ ತನಿಖಾಧಿಕಾರಿಗಳಾದ ಶ್ರೀ ಸತೀಶ್ ಕುಮಾರ್, ಅಬಕಾರಿ ಉಪ ನಿರೀಕ್ಷಕರು(2) ಮತ್ತು ಪ್ರಕರಣದಲ್ಲಿ ಮಾದರಿ ಸೀಸೆಗಳನ್ನು ರಸಾಯನಿಕ ವಿಶ್ಲೇಷಕರಲ್ಲಿಗೆ ಕೊಂಡೊಯ್ದುದ್ದು ವಿಶ್ಲೇಷಣಾ ವರದಿ ಪಡೆದುಕೊಂಡ ಬಗ್ಗೆ ಅಬಕಾರಿ ರಕ್ಷಕರಾದ ಶ್ರೀ.ಉಮೇಶ್ ಇವರು ಪ್ರಾಸಿಕ್ಯೂಶನ್ ಸಾಕ್ಷಿದಾರರಾಗಿ ಹಾಗೂ ಪ್ರಕರಣದಲ್ಲಿ ರಕ್ಷಣಾ ಸಾಕ್ಷಿದಾರರಾದ ಶ್ರೀ. ರವೀಂದ್ರ ಇವರು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷ್ಯವನ್ನು ನೀಡಿರುತ್ತಾರೆ.

ಅಭಿಯೋಗದ ಪರ ಸಾಕ್ಷಿ ಹಾಗೂ ರಕ್ಷಣಾ ಪರ ರಕ್ಷಣಾ ಸಾಕ್ಷಿ ವಿಚಾರಣೆಯನ್ನು ನಡೆಸಿ, ಅಭಿಯೋಗದ ಪರ ವಾದ ಆಲಿಸಿ ,ಪ್ರಾಧಿಕಾರಕ್ಕೆ ಸಲ್ಲಿಸಿರುವ ದಾಖಲಾತಿಗಳು, ಪ್ರಾಸಿಕ್ಯೂಶನ್ ಪರ ನೀಡಿರುವ ಸಾಕ್ಷಿಗಳ ಹೇಳಿಕೆಗಳನ್ನು ಪರಿಶೀಲಿಸಿ ಮುಂದಿನ ಆದೇಶ ಹೊರಡಿಸುವ ಮುನ್ನ ಈ ಕೆಳಕಂಡ ವಿವಾದಾಂಶಗಳಿಗೆ ಉತ್ತರವನ್ನು ಪಡೆಯಬೇಕಾಗಿರುತ್ತದೆ.

**ವಿವಾದಾಂಶಗಳು**

1) ದಿನಾಂಕ:14–11–2006ರಂದು ವಾಹನ ಸಂ:KA-19-A-987 ಅಂಬಾಸಿಡರ್ ಕಾರು ಇದರಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿದೆಯೇ? ಮತ್ತು ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ ಮತ್ತು ನಿಯಮಗಳ ರೀತ್ಯಾ ಅಪರಾಧಕ್ಕೆ ಬಳಸಲಾಗಿದೆಯೇ?

2) ವಶಪಡಿಸಿಕೊಂಡಿರುವ ವಾಹನದ ಮಾಲೀಕರು ತಾನೆಂದು, ತನಗೆ ತಿಳಿಯದೇ ಕರ್ನಾಟಕ ಅಬಕಾರಿ ಕಾಯಿದೆಯಡಿ ಅಕ್ರಮ ಮದ್ಯ ಸಾಗಾಣಿಕೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ವಾಹನದ ಮಾಲೀಕರು ಸಾಬೀತು ಪಡಿಸಿದ್ದಾರೆಯೇ? ಅಥವಾ ಇಲ್ಲವೇ?

3 ) ಜಪ್ತು ಪಡಿಸಲಾಗಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ಅಥವಾ ಇಲ್ಲವೇ?

ಒಂದನೇ ಅಂಶವನ್ನು ಗುಣಾತ್ಮಕವಾಗಿ,ಎರಡನೇ ಅಂಶವನ್ನು ನಕರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸ–1:–**

ಶ್ರೀ.ಸತೀಶ್ ಕುಮಾರ್,ಅಬಕಾರಿ ಉಪ ನಿರೀಕ್ಷಕರು, ಮಂಗಳೂರು ಉತ್ತರ ವಲಯ–1 ಇವರು ದಿನಾಂಕ:19–11–2008ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನುಡಿದಿರುತ್ತಾರೆ. ತಾನು ಜೂನ್ 2008ರಿಂದ ಇಲ್ಲಿಯವರೆಗೂ ಮಂಗಳೂರು ಉತ್ತರ ವಲಯ–1 ರಲ್ಲಿ ಅಬಕಾರಿ ಉಪ ನಿರೀಕ್ಷಕನಾಗಿ ಕರ್ತವ್ಯ ನಿರ್ವಹಿಸುತ್ತಿದ್ದೇನೆ,ನನಗೆ ಬಂದ ಖಚಿತ ವರ್ತಮಾನದಂತೆ ರಾಷ್ಟ್ರೀಯ ಹೆದ್ದಾರಿ ಸಂ:17ರಲ್ಲಿ ಬೆಳಿಗ್ಗೆ 5–30 ಗಂಟೆಗೆ ಸುರತ್ಕಲ್ ರಾಷ್ಟ್ರೀಯ ಹೆದ್ದಾರಿಯಲ್ಲಿ ರಸ್ತೆಗಾವಲು ನಡೆಸುತ್ತಿರುವಾಗ ಮಂಗಳೂರು ಕಡೆಗೆ ಒಂದು ಬಿಳಿ ಬಣ್ಣದ ಅಂಬಾಸಿಡರ್ ಕಾರು ಬರುತ್ತಿರುವುದನ್ನು ಕಂಡು ನಿಲ್ಲಿಸಲು ಪ್ರಯತ್ನಿಸಿದಾಗ ಕಾರು ಚಾಲಕನು ಕಾರು ನಿಲ್ಲಿಸದೇ ವೇಗವಾಗಿ ಚಲಾಯಿಸಿಕೊಂಡು ಹೋಗುತ್ತಿದ್ದಾಗ ನಾವು ಇಲಾಖಾ ವಾಹನದಲ್ಲಿ ಸದ್ರಿ ವಾಹನವನ್ನು ಬೆನ್ನಟ್ಟಿ ಕದ್ರಿ ಹಿಲ್ಸ್‌ನ ಸಮೀಪ ಕರ್ನಾಟಕ ಪಾಲಿಟೆಕ್ನಿಕ್ ಕಾಲೇಜು ಪರಿಸರದಲ್ಲಿ ಸದ್ರಿ ವಾಹನವನ್ನು ತಡೆದು ನಿಲ್ಲಿಸಿದೆವು. ಕಾರು ಚಾಲಕನು ತಪ್ಪಿಸಿಕೊಂಡು ಓಡಿ ಹೋದನು. ಸದ್ರಿ ವ್ಯಕ್ತಿಯನ್ನು ಇಲಾಖಾ ಸಿಬ್ಬಂದಿಯವರು ಬೆನ್ನಟ್ಟಿ ಹೋದಾಗಲೂ ಸಹ ಅವನನ್ನು ಹಿಡಿಯಲು ಸಾಧ್ಯವಾಗಲಿಲ್ಲ. ಸದ್ರಿ ನಿಲ್ಲಿಸಲಾದ ಬಿಳಿ ಬಣ್ಣದ ಅಂಬಾಸಿಡರ್ ಕಾರನ್ನು ಶೋಧಿಸಲಾಗಿ ಅದರ ನೊಂದಾವಣಿ ಸಂ:ಕೆಎ–19–ಎ–987 ಕಾರಿನ ಹಿಂಬದಿಯಲ್ಲಿ ಇನ್ನಿಬ್ಬರು ವ್ಯಕ್ತಿಗಳು ಅಡಗಿ ಕೂತು ಕೊಂಡಿದ್ದರು. ಸದ್ರಿ ವ್ಯಕ್ತಿಗಳ ಸೀಟು ಪರಿಶೀಲಿಸಲಾಗಿ ವ್ಯಕ್ತಿಗಳು ತಲಾ ಒಂದೊಂದು ಕಪ್ಪು ಬ್ಯಾಗ್‌ಗಳನ್ನು ಇಟ್ಟುಕೊಂಡಿರುವುದು ಕಂಡು ಬಂದು, ಸದ್ರಿ ಬ್ಯಾಗ್‌ಗಳಲ್ಲಿ ಏನಿದೆ ಎಂದು ಪರಿಶೀಲಿಸಲಾಗಿ ಮದ್ಯ ತುಂಬಿದ ಪ್ಲಾಸ್ಟಿಕ್ ಬಾಟಲಿಗಳು ತುಂಬಿಕೊಂಡಿದ್ದು ಕಂಡು ಬಂತು. ನಂತರ ಕಾರಿನ ಡಿಕ್ಕಿಯನ್ನು ನೋಡಲಾಗಿ 12 ರಟ್ಟಿನ ಪೆಟ್ಟಿಗೆಗಳಲ್ಲಿ ತಲಾ 750 ಎಂಎಲ್‌ನ ಒಟ್ಟು 12 ಬಾಟಲಿಗಳಂತೆ ಮದ್ಯ ತುಂಬಿದ ಬಾಟ್ಲಿಗಳು ಇದ್ದವು. ಅದು ಏನೆಂಬುದು ವಿಚಾರಿಸಲಾಗಿ ಅದನ್ನು ಗೋವಾದಿಂದ ರೈಲ್ವೆ ಮೂಲಕ ಅಕ್ರಮವಾಗಿ ಸಾಗಿಸಿ ತಂದ ಮದ್ಯವೆಂದು ತಿಳಿಸಿದರು. ಸದ್ರಿ ಇಬ್ಬರು ವ್ಯಕ್ತಿಗಳ ಹೆಸರು ವಿಳಾಸವನ್ನು ಕೇಳಲಾಗಿ ಒಬ್ಬಾತ ರತ್ನಾಕರ ರಾವ್ ಮತ್ತು ಇನ್ನೊಬ್ಬ ರಹೀಂ ಖಾನ್, ರತ್ನಾಕರನ ವಿಳಾಸ ಸಲ್ಮಾರ್,ಪುತ್ತೂರು ಇಲ್ಲಿಯ ನಿವಾಸಿ ಹಾಗೂ ರಹೀಂ ಖಾನ್ ಇವನು ಉಸ್ಮಾನ್ ಹಾಜಿ ಹೌಸ್, ಚೆರುವತ್ತೂರು, ಪಯ್ಯಂಚೇರಿ, ಕೇರಳ ರಾಜ್ಯ ಎಂದು ತಿಳಿಸಿರುತ್ತಾರೆ. ಸದ್ರಿ ಮದ್ಯವನ್ನು ಪರಿಶೀಲಿಸಲಾಗಿ 750 ಎಂ ಎಲ್ ನ 96 ಬಾಟಲಿಗಳ ಮೇಲೆ ರೆಡ್ ಸೀಲ್ ವಿಸ್ಕಿ ,750 ಎಂಎಲ್‌ನ 60 ಬಾಟಲಿಗಳ ಮೇಲೆ ಆಕ್ಸ್ ಫರ್ಡ್ ಕ್ಲಬ್ ವಿಸ್ಕಿ , 750 ಎಂ ಎಲ್ ನ 63 ಸೀಸೆಗಳ ಮೇಲೆ ಗೋಲ್ಡನ್ ವಿಸ್ಕಿ ಎಂಬ ಲೇಬಲ್ , 750 ಎಂ ಎಲ್‌ನ 11 ಬಾಟಲಿಗಳ ಮೇಲೆ ಸೋನಿಯಾ ತ್ರಿಬಲ್ ಎಕ್ಸ್ ರಮ್ ಎಂಬ ಲೇಬಲ್ ಹಾಗೂ 750 ಎಂ ಎಲ್ ನ 10 ಬಾಟಲಿಗಳ ಮೇಲೆ ಗೋಲ್ಡ್ ಕಾಸ್ಕ್ ತ್ರಿಬಲ್ ಎಕ್ಸ್ ರಂ ಎಂಬ ಲೇಬಲ್‌ಗಳನ್ನು ಅಂಟಿಸಿದ್ದು ಈ ರೀತಿಯಾಗಿ ಒಟ್ಟು 240 ಬಾಟಲಿಗಳು ಇದ್ದವು. ಪ್ರತಿ ಬ್ರಾಂಡಿನಿಂದ ತಲಾ ಒಂದರಂತೆ ಒಟ್ಟು 5 ಬಾಟಲಿಗಳನ್ನು ರಾಸಾಯನಿಕ ವಿಶ್ಲೇಷಣೆಗಾಗಿ ಪ್ರತ್ಯೇಕಿಸಿ ಅವುಗಳ ಮುಚ್ಚಳಗಳಿಗೆ ಬಟ್ಟೆ ಸುತ್ತಿ ದಾರ ಕಟ್ಟಿ ಇಲಾಖಾ ಸೀಲಿನಿಂದ ಸೀಲು ಮಾಡಲಾಯಿತು. ನಂತರ ಆರೋಪಿಗಳ ಹೆಸರು,ವಿಳಾಸ ವಿರುವ ಚೀಟಿಗಳನ್ನು ಮಾದರಿ ಬಾಟಲಿಗಳಿಗೂ ಮತ್ತು ಅಂಬಾಸಿಡರ್ ಕಾರಿಗೂ ಅಂಟಿಸಲಾಯಿತು. ಸೊತ್ತುಗಳನ್ನು ಇಲಾಖಾ ವಶಕ್ಕೆ ತೆಗೆದು ಕೊಂಡು ಸದ್ರಿ ವ್ಯಕ್ತಿಗಳನ್ನು ದಸ್ತಗಿರಿ ಮಾಡಲಾಯಿತು. ಸ್ಥಳದಲ್ಲಿಯೇ ಮಹಜರನ್ನು ಬೆಳಿಗ್ಗೆ 5–30 ರಿಂದ 7–15ರವರೆಗೆ ಇಲಾಖಾ ಸಿಬ್ಬಂಧಿಗಳ ಸಮಕ್ಷಮದಲ್ಲಿ ಬರೆದು ಮುಗಿಸಲಾಯಿತು. ಈ ಕುರಿತು ತಯಾರಿಸಿದ ಮಹಜರನ್ನು ನೋಡಿದ್ದು ನಿಶಾನೆ ಪಿ–1 ಎಂದು ಸಾಕ್ಷಿಯ ಸಹಿಯನ್ನು ನಿಶಾನೆ ಪಿ–1(ಎ) ಎಂದು ಗುರುತಿಸಲಾಯಿತು. ನಂತರ ಸೊತ್ತುಗಳೊಂದಿಗೆ ಕಛೇರಿಗೆ ಬಂದು

ಪ್ರ.ಮಾ.ವ ವರದಿಯನ್ನು ತಯಾರಿಸಿರುತ್ತೇನೆ. ಪ್ರ.ಮಾ.ವ ವರದಿಯನ್ನು ನಿಶಾನೆ ಪಿ–2 ಎಂದು,ಸಾಕ್ಷಿಗಳ ಸಹಿಯನ್ನು ನಿಸಾನೆ ಪಿ–2ಎ ಎಂದು ಗುರುತಿಸಲಾಯಿತು. ಮಾದರಿ ಮದ್ಯದ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗೆ ಕೊಟ್ಟಿರುತ್ತೇನೆ. ದಿ:06–12–2006ರಂದು ರಾಸಯನಿಕ ಪರೀಕ್ಷಾ ವರದಿಯನ್ನು ಪಡೆದುಕೊಂಡಿರುತ್ತೇನೆ. ನಿಶಾನೆ ಪಿ–3 ರಲ್ಲಿ ಮಾದರಿ ಮದ್ಯದ ಸೀಸೆಗಳಲ್ಲಿ ಮದ್ಯಸಾರದ ಅಂಶ ಪತ್ತೆಯಾಗಿರುವುದು ನಮೂದಾಗಿರುತ್ತದೆ. ಈ ಕುರಿತು ಮಂಗಳೂರಿನ ಜೆ.ಎಂ.ಎಫ್.ಸಿ ನ್ಯಾಯಾಲಯಕ್ಕೆ ದೋಷಾರೋಪಣಾ ಪಟ್ಟಿಯನ್ನು ಸಲ್ಲಿಸಿರುತ್ತೇನೆ. ಮತ್ತು ಅಂಬಾಸಿಡರ್ ಕಾರನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,ದ.ಕ ಜಿಲ್ಲೆ ಮಂಗಳೂರು ಇವರಿಗೆ ವರದಿಯನ್ನು ಸಲ್ಲಿಸಿರುತ್ತೇನೆ. ಸದ್ರಿ ವರದಿಯನ್ನು ನಿಶಾನೆ ಪಿ–4 ಎಂದು ಗುರುತಿಸಿರುತ್ತೇನೆ. ಸಾಕ್ಷಿಯ ಸಹಿಯನ್ನು ನಿಶಾನೆ ಪಿ–4ಎ ಎಂದು ಗುರುತಿಸಿರುತ್ತೇನೆ. ಕಾರಿನ ಮಾಲೀಕರ ಬಗ್ಗೆ ತಿಳಿದುಕೊಳ್ಳಲು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಪುತ್ತೂರು ಇವರಿಂದ ಬಿ ರಿಜಿಸ್ಟ್ರಾರ್ ವರದಿಯನ್ನು ಪಡೆದಿರುತ್ತೇನೆ. ಅದರಲ್ಲಿ ವಾಹನದ ಮಾಲೀಕರ ಹೆಸರು ರಮಾನಂದ ಎಂದು ನಮೂದು ಆಗಿರುತ್ತದೆ. ಸದ್ರಿ ದಾಖಲೆಯನ್ನು ನಿಶಾನೆಪಿ–5 ಎಂದು ಗುರುತಿಸಲಾಯಿತು. ಅಮಾನತುಪಡಿಸಿದ ಕಾರನ್ನು ಈಗ ನೋಡಿ ಗುರುತ್ತಿಸಿರುತ್ತೇನೆ. (ಸದ್ರಿ ಕಾರನ್ನು ವಾಹನದ ಮಾಲಿಕರು ತಮ್ಮ ಮಧ್ಯಂತರ ಸ್ವಾಧೀನಕ್ಕೆ ಪಡೆದುಕೊಂಡಿದ್ದು, ಇಂದು ನ್ಯಾಯಾಲಯದಲ್ಲಿ ಹಾಜರಿದ್ದು ವಾಹನ ಗುರುತಿಸಲು ತಕರಾರು ಇಲ್ಲವೆಂದು ತಿಳಿಸಿರುತ್ತಾರೆ) ಸದ್ರಿ ಅಂಬಾಸಿಡರ್ ಕಾರು ಅಕ್ರಮ ಮದ್ಯ ಸಾಗಾಣಿಕೆಗೆ ಉಪಯೋಗಿಸಿರುವುದರಿಂದ ಸರ್ಕಾರ ಮುಟ್ಟುಗೋಲು ಹಾಕಬೇಕೆಂದು ವಿನಂತಿಸಿರುತ್ತೇನೆ ಎಂದು ಸಾಕ್ಷಿ ನುಡಿದಿರುತ್ತಾರೆ.

**ಪಾಟೀ ಸವಾಲು:**

ದಿ:19–11–2008ರಂದು ಅರ್ಜಿದಾರರ ಪರ ವಕೀಲರು ಗೈರುಹಾಜರಿದ್ದು ಅವರ ಪರವಾಗಿ ಕಾರಿನ ಮಾಲೀಕರು ಸಮಯಾವಕಾಶ ಕೋರಿರುವುದರಿಂದ ಪಾಟೀ ಸವಾಲಿಗಾಗಿ ಪ್ರಕರಣವನ್ನು ಮುಂದೂಡಿ ದಿ:4–3 –2009ರಂದು ಸಾಕ್ಷಿದಾರರನ್ನು ರಕ್ಷಣಾ ಪರ ವಕೀಲರು ಪಾಟೀ ಸವಾಲು ನಡೆಸಿ ಸಾಕ್ಷಿದಾರರ ಪಾಟೀ ಸವಾಲಿಗೆ ಉತ್ತರಿಸುತ್ತಾ ,ತಾನು ಮತ್ತು ತನ್ನ ಸಿಬ್ಬಂಧಿಯವರು ಆ ದಿವಸ ದಾಳಿಗೆ ಹೋಗಿರುತ್ತೇನೆ. ನನ್ನ ಸಿಬ್ಬಂಧಿಗಳಾದ ಸೈಯದ್ ಶಬೀರ್ ಅ.ರ, ಪ್ರಕಾಶ್ ಕುಮಾರ್,ಅ.ರ ಹಾಗೂ ಶ್ರೀ.ಮನೋಹರ ಅ.ರ ಎಂಬವರು ತನ್ನ ಜೊತೆಯಲ್ಲಿದ್ದರು. ಇಲಾಖಾ ಜೀಪಿನಲ್ಲಿ ದಾಳಿಗೆ ಹೋಗಿರುತ್ತೇವೆ, ಕೇಂದ್ರ ಕಛೇರಿಯಿಂದ ನಾವು ಧಾಳಿ ಸ್ಥಳಕ್ಕೆ ಹೋಗಿರುತ್ತೇವೆ. ದಾಳಿಗೆ ಹೋಗುವ ಸಂದರ್ಭ ಸಮವಸ್ತ್ರ ಹಾಕಿ ಕೊಂಡಿರುತ್ತೇವೆ. ನಾವು ಕೊಟ್ಟಾರ ಚೌಕಿಯಿಂದಾಗಿ ರಾ.ಹೆ –17ರಲ್ಲಿ ಮುಂದೆ ಸಾಗಿ ಬಂದು ಅಪರಾಧ ಸ್ಥಳಕ್ಕೆ ಬಂದಿರುತ್ತೇವೆ. ಅಪರಾದ ಸ್ಥಳಕ್ಕೆ ಬೆಳಿಗ್ಗೆ ಸುಮಾರು 5 ಗಂಟೆಗೆ ತಲುಪಿರುತ್ತೇವೆ. ನಮ್ಮ ಗಾಡಿಯನ್ನು ಕುಂಟಿಕಾನ್ ಪ್ರದೇಶದಲ್ಲಿ ನಿಲ್ಲಿಸಿದ್ದೆವು. ಕುಂಟಿಕಾನ ರಾಷ್ಟ್ರೀಯ ಹೆದ್ದಾರಿ 17ರಲ್ಲಿ 4 ಮಾರ್ಗ ಸೇರುವ ಒಂದು ಸ್ಥಳವಾಗಿರುತ್ತದೆ. ನಾವು ವಾಹನವನ್ನು ಕುಂಟಿಕಾನ ಎಂಬಲ್ಲಿ ರಾಷ್ಟ್ರೀಯ ಹೆದ್ದಾರಿಗೆ ಮುಖಮಾಡಿ ಪಶ್ಚಿಮ ದಿಕ್ಕಿಗೆ ಮುಖ ಮಾಡಿ ನಿಲುಗಡೆ ಮಾಡಿರುತ್ತೇವೆ. ನಮ್ಮ ವಾಹನವು ರಸ್ತೆಯಿಂದ ಸ್ವಲ್ಪ ದೂರದಲ್ಲಿ ನಿಲುಗಡೆಗೊಂಡಿರುತ್ತದೆ. ಆ ದಿವಸ ಬಹಳಷ್ಟು ವಾಹನಗಳ ತಪಾಸಣೆ ಮಾಡಿರುತ್ತೇವೆ. ನಾವು ಆ ದಿವಸ 10ರಿಂದ ಮೇಲ್ಪಟ್ಟು ವಾಹನ ತಪಾಸಣೆ ಮಾಡಿರುತ್ತೇವೆ. ತಪಾಸಣೆ ಮಾಡಿದ ವಾಹನಗಳ ನೊಂದಣಿ ಸಂಖ್ಯೆಗಳನ್ನು ಬರೆದುಕೊಂಡಿರುವುದಿಲ್ಲ. ರಸ್ತೆ ತಡೆ ಬಗ್ಗೆ ನಮ್ಮಲ್ಲಿ ಯಾವುದೇ ಉಪಕರಣಗಳು ಉಪಯೋಗದಲ್ಲಿರಲಿಲ್ಲ. ನಾವು ಮತ್ತು ಸಿಬ್ಬಂಧಿಯವರು ವಾಹನದ ಹೊರಗೆ ಬಂದು ರಸ್ತೆ ಬದಿ ನಿಂತಿದ್ದೆವು. ಸದ್ರಿ ರಾಷ್ಟ್ರೀಯ ಹೆದ್ದಾರಿಯಲ್ಲಿ ವಾಹನ ಸಂಚಾರವಿರುತ್ತದೆ. ನಾವು ಕುಂಟಿಕಾನ ರಸ್ತೆಯಿಂದ ವಿಮಾನ ನಿಲ್ದಾಣಕ್ಕೆ ಹೋಗಲಿಕ್ಕೆ ಆಗುತ್ತದೆ. ನಾವು ನಿಂತ ಕುಂಟಿಕಾನ ಎಂಬ ಸ್ಥಳದ ಹತ್ತಿರದಲ್ಲಿ ಯಾವುದೇ ಮನೆಗಳು ಇರುವುದಿಲ್ಲ. ನಮಗೆ ಕರ್ತವ್ಯದ ಮೇಲೆ ಮಾಹಿತಿ ಸಿಕ್ಕಿದಾಗ ಕರ್ತವ್ಯ ನಿರ್ವಹಿಸುವುದು ಸಾಮಾನ್ಯ ಸಂಗತಿಯಾಗಿರುತ್ತದೆ. ನನಗೆ ಮಾಹಿತಿಯು ಮೊಬೈಲ್ ಫೋನ್ ಮೂಲಕ ಬಂದಿರುತ್ತದೆ. ನಾನು ದಾಳಿಗೆ ಸಂಬಂಧಿಸಿ ನನಗೆ ಬಂದ ಮಾಹಿತಿ ನಮ್ಮ ಕಛೇರಿಯ ಚಲನ ವಲನ ರಿಜಿಸ್ಟ್ರಾರ್‌ನಲ್ಲಿ ನಮೂದಿಸಿರುತ್ತೇನೆ.ಆ ದಿವಸ ಮಾಹಿತಿ ಬಂದ ವಿಷಯವನ್ನು ನಾನು ನನ್ನ ಮೇಲಾದಿಕಾರಿಗಳಿಗೆ ತಿಳಿಸಿರುವುದಿಲ್ಲ. ಮತ್ತು ಈ ದಾಳಿ ಸಂಬಂಧಿಸಿ ನಾನು ಯಾವುದೇ ಶೋಧನಾ ವಾರೆಂಟ್ ಪಡೆದಿರುವುದಿಲ್ಲ, ನನ್ನ ಕಛೇರಿಯಿಂದ ರಸ್ತೆಯಲ್ಲಿ ಕಾದು ನಿಂತ ಸ್ಥಳಕ್ಕೆ ಸುಮಾರು 1 ಕಿ.ಮಿ ದೂರವಿರಬಹುದು. ವಶಪಡಿಸಿಕೊಂಡಿರುವ ವಾಹನ ನಾವು ನಿಂತ ಸ್ಥಳಕ್ಕೆ ಬೆಳಗ್ಗಿನ ಜಾವ 5–30 ಗಂಟೆಗೆ ಬಂದಿರುತ್ತದೆ. ಸದ್ರಿ ವಾಹನ ಬಂದ ಕೂಡಲೇ ನಮ್ಮ ಸಿಬ್ಬಂಧಿಯವರು ವಾಹನವನ್ನು ನಿಲ್ಲಿಸಲು ಸನ್ನೆ ಮಾಡಿರುತ್ತಾರೆ. ನಮ್ಮ ಸಿಬ್ಬಂಧಿಯವರು ಕೈಯಲ್ಲಿದ್ದ ಲಾಠಿಗಳನ್ನು ಸನ್ನೇ ಮಾಡಿ ತೋರಿಸಿ ನಿಲ್ಲಲು ಸೂಚನೆ ನೀಡಿರುತ್ತಾರೆ. ನಾವು ನಿಂತ ಸ್ಥಳದಿಂದ ವಾಹನ ನಿಲ್ಲಿಸದೇ ಸುಮಾರು 1/2 ಕಿ.ಮಿ ಮುಂದೆ ಸಾಗಿ ಹೋಗಿರುತ್ತದೆ. ನಾವು ನಿಂತ ಸ್ಥಳದಿಂದ ವಾಹನವನ್ನು ಬೆನ್ನಟ್ಟಿ ಅದರ ಮುಂದೆ ಸಾಗಿ ನಮ್ಮ ವಾಹನವನ್ನು ಅಡ್ಡಕಟ್ಟಿ ಸದ್ರಿ ಅಂಬಾಸಿಡರ್ ಕಾರನ್ನು ತಡೆಹಿಡಿದು ನಿಲ್ಲಿಸಿರುತ್ತೇವೆ. ನಾವು ಸದ್ರಿ ವಾಹನವನ್ನು ಕೆ.ಪಿ.ಟಿ ಎಂಬ ಪ್ರದೇಶದಲ್ಲಿ ರಾ.ಹೆ –17ರಲ್ಲಿ ತಡೆದು ನಿಲ್ಲಿಸಿರುತ್ತೇವೆ. ಈ ಕಾರ್ಯಕ್ಕೆ ಸುಮಾರು 5 ನಿಮಿಷ ಕಾಲ ತಗಲಿದ್ದು,ಸದ್ರಿ ವಾಹನದಲ್ಲಿದ್ದ ಇಬ್ಬರು ವ್ಯಕ್ತಿಗಳು ಸಾಮಾನ್ಯ ಷರಟು ಮತ್ತು ಪ್ಯಾಂಟ್ ಧರಿಸಿದ್ದರು. ವಾಹನದಲ್ಲಿದ್ದ ಒಬ್ಬ ವ್ಯಕ್ತಿ ಓಡಿ ಹೋಗಲು ಪ್ರಯತ್ನಿಸಿದ್ದು ಅವನನ್ನು ಹಿಡಿಯಲು ನಮ್ಮ ಸಿಬ್ಬಂಧಿಗಳು ಪ್ರಯತ್ನಿಸಿರುತ್ತಾರೆ. ಅವರು ಸದ್ರಿ ಓಡಿ ಹೋದ ವ್ಯಕ್ತಿಯನ್ನು ಬೆನ್ನಟ್ಟಿ ಓಡಿ ಹೋಗಿರುತ್ತಾರೆ. ನಾವು ತಡೆಕಟ್ಟಿದ ವಾಹನವನ್ನು ನಮ್ಮ ಕಛೇರಿಗೆ ನಮ್ಮ ಇಲಾಖಾ ಚಾಲಕರು ಚಲಾಯಿಸಿಕೊಂಡು ಹೋಗಿರುತ್ತಾರೆ. ಕಚೇರಿಗೆ ಹಿಂದೆ ಬರುವಾಗ ಸುಮಾರು 7–30 ಗಂಟೆ ಸಮಯವಾಗಿರುತ್ತದೆ. ನನ್ನ ಒಟ್ಟಿಗೆ ಇದ್ದ ಸಿಬ್ಬಂಧಿಗಳು ವಿಶೇಷ ತಂಡದ ಕಾರ್ಯಕ್ಕೆ ನಿಯೋಜಿಸಿದ ಸಿಬ್ಬಂದಿಗಳಾಗಿರುತ್ತಾರೆ. ಸದ್ರಿ ದಿನಾಂಕದಂದು ಆ ಸಿಬ್ಬಂದಿಯವರನ್ನು ನಾನು ದಾಳಿ ಬಗ್ಗೆ ಕರೆದಿರುತ್ತೇನೆ. ಆ ದಿವಸ ಬೆಳಿಗ್ಗೆ 4–30 ಗಂಟೆಗೆ ಅವರನ್ನು ನಾನು ಕರೆ ಮಾಡಿರುತ್ತೇನೆ ,ನಾವು ತಯಾರು ಮಾಡಿದ ಸ್ಥಳ ಮಹಜರನ್ನು ಸಬೀರ್ ಅ.ರ ಇವರು ಬರೆದಿರುತ್ತಾರೆ. ನಾವು ಸ್ಥಳ ಮಹಜರನ್ನು ಬೆಳಿಗ್ಗೆ 6–3 0 ಗಂಟೆಯಿಂದ ಬೆಳಿಗ್ಗೆ 7–15 ಗಂಟೆಯವರೆಗೆ ತಯಾರಿಸಿರುತ್ತೇವೆ. ನಾವು ಸ್ಥಳ ಮಹಜರು ತಯಾರಿಸಿದ ಸಂದರ್ಭ ಪಂಚ ಸಾಕ್ಷಿದಾರರನ್ನು ಕರೆಯಲು ಪ್ರಯತ್ನ ಮಾಡಿರುತ್ತೇವೆ. ಆದರೆ ಸಮಯ ಬೆಳಗ್ಗಿನ ಜಾವವಾದುದರಿಂದ ಯಾವೊಬ್ಬರು ಪಂಚರು ಸಿಗಲಿಲ್ಲ ಸ್ಥಳ ಮಹಜರಿಗೆ ಸಹಿ ಮಾಡಿರುವ ಸಾಕ್ಷಿದಾರರು ನಮ್ಮ ಇಲಾಖಾ ಸಿಬ್ಬಂಧಿಯವರೇ ಅಗಿರುತ್ತಾರೆ. ನಾವು ಸ್ಥಳ ಮಹಜರು ತಯಾರಿಸಿದ ಸಂದರ್ಭ ಸ್ಥಳದ ಯಾವುದೇ ನಕಾಶೆ ತಯಾರಿಸಿ ಕೊಂಡಿರುವುದಿಲ್ಲ.ನಾವು ದಸ್ತಗಿರಿ ಮಾಡಿದ ಆರೋಪಿಯನ್ನು ವಿಚಾರಿಸಲಾಗಿ ಸದ್ರಿ ವಾಹನ ದಲ್ಲಿ ಗೋವಾದಿಂದ ರೈಲು ಮೂಲಕ ತಂದ ಅಕ್ರಮ ಮದ್ಯವನ್ನು ಸಾಗಿಸಲಾಗುತ್ತಿತ್ತು ಎಂದು

ತಿಳಿಸಿರುತ್ತಾನೆ. ವಾಹನದ ಶೋಧನೆ ಬಗ್ಗೆ ನಾನು ಸರ್ಚ್ ಮೆಮೋ ತಯಾರಿಸಿರುತ್ತೇನೆ. ಸದ್ರಿ ನಾನು ತಯಾರಿಸಿದ ಸರ್ಚ್ ಮೆಮೊವನ್ನು ನಿಶಾನೆ ಪಿ–6 ಎಂದು ಗುರುತಿಸಲಾಯಿತು. ಸದ್ರಿ ಸರ್ಚ್ ಮೆಮೋದಲ್ಲಿ ವರ್ತಮಾನ ತಲುಪಿದ ಸಮಯವನ್ನು 4–30 ಎಂಬುದಾಗಿ ಸರಿಪಡಿಸಿರುವುದು ನನ್ನಿಂದಾಗಿರುತ್ತದೆ. ಸದ್ರಿ ಸರ್ಚ್ ಮೆಮೊದಲ್ಲಿ ನನ್ನದಲ್ಲದೇ ಬೇರೆ ಯಾವ ಸಿಬ್ಬಂಧಿಯವರ ಸಹಿ ಇರುವುದಿಲ್ಲ, ನಾವು ತಡೆಹಿಡಿದ ವಾಹನದಲ್ಲಿ ಪ್ರಯಾಣಿಸುತ್ತಿದ್ದ ಆರೋಪಿಗಳು ಯಾವ ಸೀಟಿನಲ್ಲಿ ಕುಳಿತಿದ್ದರು ಎಂಬುದು ನನಗೆ ನೆನಪಿಲ್ಲ, ಕಾರಿನಲ್ಲಿದ್ದ ವ್ಯಕ್ತಿಗಳ ಪೈಕಿ ನಾವು ದಸ್ತಗಿರಿ ಮಾಡಿದ ವ್ಯಕ್ತಿಗಳು ಓಡಲು ಪ್ರಯತ್ನಿಸಿರುವುದಿಲ್ಲ. ನಾನು ಜಪ್ತು ಪಡಿಸಿದ ಅಕ್ರಮ ಮದ್ಯಗಳ ಚೀಲಗಳಲ್ಲಿ ಇರಿಸಲಾಗಿದ್ದು ,ಪ್ರತಿ ಚೀಲದಲ್ಲಿ ಎಷ್ಟು ಬಾಟಲಿಗಳು ಇತ್ತು ಎಂಬುದಾಗಿ ಪ್ರತ್ಯೇಕಿಸಿ ನಮೂದಿಸಿರುವುದಿಲ್ಲ. ಹಾಗೂ ಅ ಬ್ಯಾಗ್‌ಗಳಲ್ಲಿ ಯಾವ ಯಾವ ಬ್ರಾಂಡ್ ನಾಮಗಳ ಮದ್ಯಗಳು ಇದ್ದವು ಎಂಬುದಾಗಿ ಸಹ ಪ್ರತ್ಯೇಕವಾಗಿ ಬರೆದಿರುವುದಿಲ್ಲ, ಬ್ಯಾಗುಗಳನ್ನು ನಾನು ಮದ್ಯದ ಜೊತೆಗೆ ಜಪ್ತುಪಡಿಸಿರುತ್ತೇನೆ. ಕಾರಿನ ಡಿಕ್ಕಿಯಲ್ಲಿದ್ದ ಮದ್ಯಗಳನ್ನು ರಟ್ಟಿನ ಪೆಟ್ಟಿಗೆಯಲ್ಲಿ ಒಂದು ರಟ್ಟಿನ ಪೆಟ್ಟಿಗೆಯಲ್ಲಿ ಇದ್ದಂತೆ ಒಟ್ಟು 12 ಪೆಟ್ಟಿಗೆಗಳಲ್ಲಿ ಪ್ರತಿಯೊಂದು ಬಾಕ್ಸ್‌ನಲ್ಲಿ 12 ರಂತೆ ಒಟ್ಟು 144, 750 ಎಂಎಲ್ ಮದ್ಯ ತುಂಬಿದ ಬಾಟಲಿಗಳಾಗಿ ನಮೂದಿಸಿರುತ್ತೇನೆ. ಪ್ರತಿ ರಟ್ಟಿನ ಪೆಟ್ಟಿಗೆಯಲ್ಲಿ ಇದ್ದ 12 ಬಾಟಲಿಗಳ ಪೈಕಿ ಯಾವ ಬ್ರಾಂಡಿನ ಎಷ್ಟು ರಟ್ಟಿನ ಪೆಟ್ಟಿಗೆ ಎಂದು ಪ್ರತ್ಯೇಕವಾಗಿ ನಮೂದಿಸಿಲ್ಲ ಹಾಗೂ 12ರ ರಟ್ಟಿನ ಪೆಟ್ಟಿಗೆ ನಾನು 1ರಿಂದ 13 ರವರೆಗೆ ಯಾವುದೇ ಕ್ರ.ಸಂ ಯನ್ನು ನಾನು ಬರೆದಿರುವುದಿಲ್ಲ ಎಂದು ಸಾಕ್ಷಿ ನುಡಿದು ಪಾಟೀ ಸವಾಲಿನ ಮುಂದಿನ ಭಾಗವನ್ನು ಮುಂದುವರಿಸಲು ರಕ್ಷಣಾ ಪರ ವಕೀಲರ ಕೋರಿಕೆ ಸಲ್ಲಿಸಿದ್ದ ಮೇರೆಗೆ ನಂತರದಲ್ಲಿ ದಿ:3–11–2009ರಂದು ಪಾಟೀ ಸವಾಲು ಮುಂದುವರಿಸಲಾಯಿತು. ಅಪರಾಧ ಸ್ಥಳದಲ್ಲಿ ಆರೋಪಿಯನ್ನು ದಸ್ತಗಿರಿ ಮಾಡಿದ ಬಗ್ಗೆ ಅರೆಸ್ಟ್ ಮೆಮೊ ತಯಾರಿಸಿರುವುದಿಲ್ಲ. ನಾವು ಜಪ್ತುಪಡಿಸಿದ ಮದ್ಯಗಳ ಪ್ರಮಾಣ ಬಗ್ಗೆ ವಾಹನದ ಹಿಂದಿನ ಡಿಕ್ಕಿ ಭಾಗದಲ್ಲಿ ಮತ್ತು ವಾಹನ ಹಿಂದಿನ ಸ್ಥಳದಲ್ಲಿ ಎಷ್ಟು ಪ್ರಮಾಣದ ಮದ್ಯ ಇತ್ತು ಎಂದು ಹೇಳಲು ಸಾಧ್ಯ ಇಲ್ಲ ಹಾಗೂ ಆ ದಾಸ್ತಾನುಗಳಲ್ಲಿ ಡಿಕ್ಕಿ ಭಾಗದಲ್ಲಿ ಯಾವ ಬ್ರಾಂಡ್ ಮದ್ಯ, ಕಾರಿನ ಹಿಂಬದಿ ಸೀಟಿನಲ್ಲಿ ಯಾವ ಬ್ರಾಂಡಿನ ಮದ್ಯ ಇರಿಸಲಾಗಿತ್ತು ಎಂದು ಹೇಳಲು ಸಾಧ್ಯವಿಲ್ಲ. ನಾವು ಜಪ್ತುಪಡಿಸಿದ ಮದ್ಯದ ಮಾದರಿಗಳನ್ನು ರಾಸಾಯನಿಕ ವಿಶ್ಲೇಷಣೆಗೆ ಕಳುಹಿಸುವ ಬಗ್ಗೆ ನನ್ನ ಕಛೇರಿಯಿಂದ ರಾಸಾಯನಿಕ ವಿಶ್ಲೇಷಕರು, ಮಂಗಳೂರು ಇವರಿಗೆ ಪತ್ರ ಮೂಲಕ ಕಳುಹಿಸಿರುತ್ತೇನೆ. ಈ ಪ್ರಕರಣಕ್ಕೆ ಸಂಬಂಧಿಸಿ ಮಾದರಿ ರಾಸಾಯನಿಕ ವಿಶ್ಲೇಷಣೆಗೆ ಕಳುಹಿಸಿದ ಬಗ್ಗೆ ಕಛೇರಿಯಲ್ಲಿ ದಾಖಲೆ ಲಭ್ಯವಿದ್ದು,ಈ ಪ್ರಾಧಿಕಾರದ ಮುಂದೆ ಹಾಜರು ಪಡಿಸಲು ಸಾಧ್ಯವಿದೆ, ನಾವು ವಾಹನವನ್ನು ಆ ದಿವಸ ಬೆಳಿಗ್ಗೆ 5–30 ಗಂಟೆಗೆ ತಡೆದು ನಿಲ್ಲಿಸಿದೆವು. ಆ ಅಪರಾಧ ಸ್ಥಳವಾದ ಕೆಪಿಟಿ ಜಂಕ್ಷನ್ ಎಂಬಲ್ಲಿ ಒಂದು ಪೆಟ್ರೋಲ್ ಬಂಕ್ ಮತ್ತೊಂದು ದಿಕ್ಕಿಗೆ ಒಂದು ಬಾರ್ ಅಂಡ ರೆಸ್ಟೋರೆಂಟ್ ಇದ್ದು ಇತರೆ ಯಾವುದೇ ವಾಸದ ಮನೆಗಳಿರುವುದಿಲ್ಲ.ಪ್ರಕರಣದ ಪ್ರ.ಮಾ.ವ ನಾನೇ ತಯಾರಿಸಿರುತ್ತೇನೆ. ನಾನು ಪ್ರಥಮ ಮಾಹಿತಿ ವರದಿಯನ್ನು ಮಾನ್ಯ ನ್ಯಾಯಾಲಯಕ್ಕೆ ಒಪ್ಪಿಸಿದ್ದು ಈ ಸಂಬಂಧ ಯಾವುದೇ ಲಿಖಿತ ದೂರು ಅರ್ಜಿ ಸಲ್ಲಿಸಿರುವುದಿಲ್ಲ. ಈ ವಿಷಯವನ್ನು ನಮ್ಮ ಮೇಲಾದಿಕಾರಿ ಅಬಕಾರಿ ಜಂಟಿ ಆಯುಕ್ತರಿಗೆ 7–30ಗಂಟೆಗೆ ತಿಳಿಸಿರುತ್ತೇನೆ. ಈ ಅಪರಾಧಕ್ಕೆ ಸಂಬಂಧಿಸಿದ ಆರೋಪಿಗಳ ಹೇಳಿಕೆ ಪಡೆದು ಕೊಂಡಿರುವುದಿಲ್ಲ, ಮಂಗಳೂರು ನಗರಕ್ಕೆ ಮತ್ತು ಮಂಗಳೂರು ನಗರದಲ್ಲಿ ಅಪರಾಧ ಸ್ಥಳಕ್ಕೆ ಹತ್ತಿರವಾಗಿರುವ ರೈಲ್ವೆ ನಿಲ್ದಾಣ ಅಂದರೆ ಕಂಕನಾಡಿ ರೈಲ್ವೆ ನಿಲ್ದಾಣವಾಗಿರುತ್ತದೆ. ಗೋವಾ–ಕರ್ನಾಟಕ ರಾಜ್ಯ ಗಡಿ ಪ್ರದೇಶದಲ್ಲಿ ಪೊಲೀಸ್ ಮತ್ತು ಆಬಕಾರಿ ಇಲಾಖಾ ತಪಾಸಣಾ ಠಾಣೆಗಳು ಇರುವುದು ಗೊತ್ತಿರುತ್ತದೆ. ನಾನು ಪ್ರಕರಣಕ್ಕೆ ಸಂಬಂಧಿಸಿ ಮಹಜರನ್ನು ಈ ಕಚೇರಿಯಲ್ಲಿ ತಯಾರಿಸಿದ್ದೇನೆ ಎಂದರೆ ಸರಿಯಲ್ಲ, ನಾನು ತಯಾರಿಸಿದ ಮಹಜರಿನಲ್ಲಿ ವಾಹನದ ಚಾಸಿಸ್ /ಇಂಜಿನ್ ನಂಬರನ್ನು ಮಹಜರು ತಯಾರಿಸಿದ ನಂತರ ಸೇರಿಸಿದ್ದೇನೆ ಎಂದರೆ ಸರಿಯಲ್ಲ, ಈ ಪ್ರಕರಣದ ಆರೋಪಿಯನ್ನು ನಾವು ರೈಲ್ವೆಸ್ಟೇಷನಿನಿಂದ ಕರೆದು ತಂದಿದ್ದೇವೆ ಎಂದರೆ ಸರಿಯಲ್ಲ, ಹಾಗೂ ಈ ವಾಹನವನ್ನು ಸಹಾ ಕಂಕನಾಡಿ ರೈಲ್ವೆ ಸ್ಟೇಷನ್‌ನಲ್ಲಿ ಜಪ್ತು ಪಡಿಸಲಾಗಿದೆ ಎಂದರೆ ಸರಿಯಲ್ಲ,ಈ ಪ್ರಕರಣದಲ್ಲಿ ಜಪ್ತುಪಡಿಸಿದ ಮದ್ಯ /ಸೊತ್ತುಗಳಿಗೂ ವಾಹನಕ್ಕೂ ಯಾವುದೇ ಸಂಬಂಧ ಇಲ್ಲ ಎಂದರೆ ಸರಿಯಲ್ಲ ಎಂದು ಪಾಟೀ ಸವಾಲಿಗೆ ಉತ್ತರಿಸಿರುತ್ತಾರೆ.

**ಪ್ರಾ.ಸ–2:–**

ಶ್ರೀ.ಉಮೇಶ್ ಅ.ರ ಮಂಗಳೂರು ಉತ್ತರ ವಲಯ –1 ಇವರು ದಿನಾಂಕ:29–12–2009ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನುಡಿಯುತ್ತಾ, ತಾನು ಜನವರಿ 2006ರಿಂದ ಅಬಕಾರಿ ರಕ್ಷಕನಾಗಿ ಮಂಗಳೂರು ಉತ್ತರ ವಲಯ–1ರಲ್ಲಿ ಕೆಲಸ ಮಾಡುತ್ತಿದ್ದೇನೆ. ದಿನಾಂಕ:16–11–2006ರಂದು ಈ ಪ್ರಕರಣಕ್ಕೆ ಸಂಬಂಧಿಸಿದ ಕೋರಿಕೆ ಪತ್ರ ಮತ್ತು ಮದ್ಯ ತುಂಬಿದ 5 ಬಾಟಲಿಗಳನ್ನು ಅಬಕಾರಿ ಉಪ ನಿರೀಕ್ಷಕರವರವರು ರಾಸಾಯನಿಕ ವಿಶ್ಲೇಷಕರ ಕಛೇರಿ ಮಂಗಳೂರು ಇಲ್ಲಿಗೆ ಪರೀಕ್ಷೆಗಾಗಿ ಕೊಂಡುಹೋಗಲು ನನಗೆ ಒಪ್ಪಿಸಿ ಆದೇಶಿಸಿದ ಪ್ರಕಾರ ನಾನು ಮೇಲೆ ತಿಳಿಸಿದ ಕೋರಿಕೆ ಪತ್ರ ಮಾದರಿ ಬಾಟಲಿಗಳನ್ನು ರಾಸಾಯನಿಕ ವಿಶ್ಲೇಷಕರ ಕಛೇರಿಗೆ ದಿ:16–11–2006ರಂದು ಒಪ್ಪಿಸಿರುತ್ತೇನೆ. ದಿ:6–12–2006ರಂದು ಮೇಲೆ ಹೇಳಿದ ರಾಸಾಯನಿಕ ವಿಶ್ಲೇಷಕರ ಕಛೇರಿಗೆ ಹೋಗಿ ಪರೀಕ್ಷಿಸಿದ ಬಾಟಲಿಗಳನ್ನು ವರದಿ ಸಮೇತ ನಮ್ಮ ಕಛೇರಿಗೆ ತಂದು ಒಪ್ಪಿಸಿರುತ್ತೇನೆ ಎಂದು ಸಾಕ್ಷಿ ನುಡಿದಿರುತ್ತಾರೆ.

**ಪಾಟೀ ಸವಾಲು:**

ರಕ್ಷಣಾ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತ ,ನನಗೆ ಕಛೇರಿ ಮುಖ್ಯಸ್ಥರು ರಾಸಾಯನಿಕ ವಿಶ್ಲೇಷಕರಲ್ಲಿಗೆ ಕೊಂಡು ಹೋದ ಮಾದರಿಗಳನ್ನು ವಿಶ್ಲೇಷಕರ ಕಛೇರಿಗೆ ತಲುಪಿಸಲು ಲಿಖಿತವಾಗಿ ಪತ್ರವನ್ನು ನನ್ನ ಮುಖಾಂತರ ನೀಡಿರುತ್ತಾರೆ. ನಾನು ಕೊಂಡು ಹೋದ ಮಾದರಿ ಸೀಸೆಗಳು ಸೀಲು ಮಾಡಿದ ಮಾದರಿ ಬಾಟಲಿಗಳಾಗಿದ್ದವು. ನಾನು ಆ ದಿವಸ 5 ಬಾಟಲಿಗಳನ್ನು ಕೊಂಡು ಹೋಗಿರುತ್ತೇನೆ. ಆ ಬಾಟಲಿಗಳಿಗೆ ಚೀಟಿ ಅಂಟಿಸಲಾಗಿತ್ತು. ನನ್ನ ಮೇಲಾದಿಕಾರಿಯವರು ದಿ:6–12–2006ರಂದು ವಿಶ್ಲೇಷಣೆ ಮಾಡಿದ ಬಾಟಲಿಗಳನ್ನು ವರದಿ ಸಮೇತ ವಾಪಾಸು ತರಲು ನನಗೆ ತಿಳಿಸಿರುತ್ತಾರೆ. ರಾಸಾಯನಿಕ ವಿಶ್ಲೇಷಕರ ಕಚೇರಿಯಿಂದ ಪಡೆದ ವರದಿಯಲ್ಲಿ ಏನಿದೆ ಎಂದು ನನಗೆ ಗೊತ್ತಿಲ್ಲ. ಎಂದು ಪಾಟೀ ಸವಾಲಿಗೆ ಉತ್ತರಿಸಿರುತ್ತಾರೆ.

ಡಿಡಬ್ಲ್ಯೂ–1

ಶ್ರೀ.ರವೀಂದ್ರ ಬಿನ್:ಗಂಗೋಜಿರಾವ್, ಪಡೀಲ್ ಮನೆ, ಮಂಜಳಿಕೆ ಹೌಸ್, ಮಂಗಳೂರು ತಾಲೂಕು ಇವರು ದಿನಾಂಕ:29–12–2009ರಂದು ಈ ಪ್ರಾಧಿಕಾರದ ಮುಂದೆ ರಕ್ಷಣಾ ಪರ ಸಾಕ್ಷಿ ನುಡಿಯುತ್ತಾ, KA-19-A-987 ನಂಬರಿನ ಅಂಬಾಸಿಡರ್ ಕಾರು ಶ್ರೀ.ರಮಾನಂದ ಇವರಿಗೆ ಸೇರಿದ್ದಾಗಿದ್ದು ತಾನು ಆ ವಾಹನದ ಚಾಲಕನಾಗಿ ಕೆಲಸ ದಲ್ಲಿರುತ್ತೇನೆ. ತಾನು ಸದ್ರಿ ವಾಹನವನ್ನು ಕಂಕನಾಡಿ ರೈಲ್ವೆ ಸ್ಟೇಶನ್ ಟಾಕ್ಸಿ ಸ್ಟ್ಯಾಂಡ್‌ನಲ್ಲಿ ನಿಲ್ಲಿಸಿರುತ್ತೇನೆ. ಸದ್ರಿ ಕಾರಿನಲ್ಲಿ ಬಾಡಿಗೆ ಪ್ರಯಾಣಿಕರನ್ನು ಕಂಕನಾಡಿ ಟ್ಯಾಕ್ಸಿ ಸ್ಟಾಂಡ್ ನಿಂದ ಮಾತ್ರ ಕರೆದುಕೊಂಡು ಹೋಗಿರುತ್ತೇನೆ. ದಿ:14–11–2006ರಂದು ಒಬ್ಬ ಅಸಾಮಿ ಬಾಡಿಗೆಗಾಗಿ ನನ್ನ ವಾಹನವನ್ನು ಪಡೆದಿರುತ್ತಾನೆ. ನಾನು ಅವರ ಬಾಡಿಗೆಗಾಗಿ ಹೋಗಿರುತ್ತೇನೆ. ಸದ್ರಿ ಬಾಡಿಗೆದಾರರು ಕಂಕನಾಡಿ ಸ್ಟ್ಯಾಂಡ್ ನಿಂದ ಬಂದರು ಪ್ರದೇಶದಲ್ಲಿರುವ ಮಂಜೂರಾನ್ ಪಂಚ ತಾರಾ ಹೋಟೆಲ್ ಗೆ ಬಿಡುವಂತೆ ತಿಳಿಸಿರುತ್ತಾರೆ. ನಾನು ಈ ದಿವಸ ನನ್ನ ಚಾಲಕ ಹುದ್ದೆಯ ಬಗ್ಗೆ ದಕ್ಷಿಣ ಕನ್ನಡ ಜಿಲ್ಲೆಯ ಟ್ಯಾಕ್ಸಿ ಚಾಲಕರ ಸಂಘದ ವತಿಯಿಂದ ದಿ:20–11–2006ರಂದು ನೀಡಿರುವ ದೃಡೀಕರಣ ಪತ್ರದ ಪ್ರತಿಯನ್ನು ಹಾಜರುಪಡಿಸಿರುತ್ತೇನೆ. ಸದ್ರಿ ದಾಖಲೆಯನ್ನು ಎ.ಡಿ.ಪಿರವರ ಅಕ್ಷೇಪಣೆಗೆ ಒಳಪಟ್ಟು ನಿಶಾನೆ ಡಿ–1 ಎಂದು ಗುರುತಿಸಲಾಗಿದೆ. ಪೊಲೀಸ್ ನಮ್ಮ ವಾಹನವನ್ನು ಬೆಳಿಗ್ಗೆ 5–30 ಗಂಟೆಗೆ ನಾಗೋರಿಯಲ್ಲಿ ವಶಪಡಿಸಿಕೊಂಡಿರುತ್ತಾರೆ. ನನ್ನ ಕಾರನ್ನು ವಶಪಡಿಸಿಕೊಂಡ ಸಂದರ್ಭದಲ್ಲಿ ಸದರಿ ಪ್ರಯಾಣಿಕರಲ್ಲಿ ಒಂದು ಸಣ್ಣ ಬ್ಯಾಗ್ ಇತ್ತು. ಆ ಬ್ಯಾಗ್ ನಲ್ಲಿ ಏನಿತ್ತು ಎಂದು ನನಗೆ ಗೊತ್ತಿಲ್ಲ. ನ್ಯಾಯಾಲಯದ ಕಲಾಪದ ಕಾಲಾವಕಾಶ ಮುಗಿದ ಕಾರಣ ಸದ್ರಿ ದಿನದಂದು ಎ.ಡಿ.ಪಿರವರ ಅಡ್ಡ ವಿಚಾರಣೆಯನ್ನು ಮುಂದುವರಿಸಿ ನಂತರ ದಿ:10–8–2010ರಂದು ಅಡ್ಡ ವಿಚಾರಣೆ ಪ್ರಾರಂಬಿಸಲಾಗಿ ರಕ್ಷಣಾ ಸಾಕ್ಷಿ ಉತ್ತರಿಸುತ್ತಾ, ದಿ:15–11–2006ರಂದು ನನ್ನ ಟ್ಯಾಕ್ಸಿಯಲ್ಲಿ ಒಬ್ಬರೇ ಪ್ರಯಾಣಿಕರಿದ್ದರು, ನಾನು ನನ್ನ ವಾಹನದ ಮಾಲೀಕರಿಗೆ ತಿಂಗಳಿಗೆ 3000/– ರೂಗಳನ್ನು ಬಾಡಿಗೆ ರೂಪದಲ್ಲಿ ನೀಡುತ್ತೇನೆ. ಈ ಬಗ್ಗೆ ನಮ್ಮಲ್ಲಿ ಲಿಖಿತ ಕರಾರು ಆಗಿರುವುದಿಲ್ಲ. ಸದ್ರಿ ಕಾರನ್ನು ನನ್ನ ಮಾಲೀಕರಿಂದ ತೆಗೆದುಕೊಳ್ಳುವ ಮೊದಲೇ ನನ್ನ ಪರಿಚಯ ಅವರಿಗಿತ್ತು. ಸದ್ರಿ ಕಾರನ್ನು ನಾನು ಬಾಡಿಗೆಗೆ ತೆಗೆದುಕೊಂಡಾಗ ನನ್ನ ಮತ್ತು ಕಾರಿನ ಮಾಲೀಕರ ನಡುವೆ ಯಾವುದೇ ಲಿಖಿತ ಹಾಗೂ ಮೌಖಿಕ ಒಪ್ಪಂದ ಆಗಿರುವುದಿಲ್ಲ. ಈ ಕಾರನ್ನು ಬಳಸುವ ಬಗ್ಗೆ ಕೂಡಾ ನನ್ನ ವಾಹನ ಮಾಲೀಕರು ಯಾವುದೇ ವಿಶೇಷ ಮಾಹಿತಿ ನೀಡಿರುವುದಿಲ್ಲ. ನನ್ನ ಕಾರನ್ನು ಅಬಕಾರಿ ಇಲಾಖೆಯವರು ವಶಪಡಿಸುವ ಸುಮಾರು 2 ವರ್ಷ ಹಿಂದೆ ನಾನು ಈ ಕಾರನ್ನು ನನ್ನ ಕಾರಿನ ಮಾಲಿಕರಿಂದ ಬಾಡಿಗೆಗೆ ಓಡಿಸಲು ಪಡೆದುಕೊಂಡಿರುತ್ತೇನೆ . ಈಗ ಕೂಡಾ ಸದ್ರಿ ಕಾರನ್ನು ನಾನು ಬಾಡಿಗೆಗೆ ಓಡಿಸುತ್ತಿದ್ದೇನೆ. ಈಗ ಕೂಡ ಅದೇ ಬಾಡಿಗೆ ಇರುತ್ತದೆ. ನಾನು ತಿಂಗಳ ಕೊನೆಗೆ ರೂ.3000ನ್ನು ಕೊಡುವುದಲ್ಲದೇ ನಮ್ಮೊಳಗೆ ಬೇರೆ ಯಾವುದೇ ಬೇರೆ ವ್ಯವಸ್ಥೆ ಇರುವುದಿಲ್ಲ ಹಾಗೂ ವಾಹನದ ಮೇಲಿನ ನಿರ್ವಹಣೆ ಬಗ್ಗೆ ಕೂಡ ನನ್ನ ಮಾಲೀಕರಿಗೆ ಯಾವುದೇ ಜವಾಬ್ದಾರಿ ಇರುವುದಿಲ್ಲ. ನನ್ನ ಕಾರನ್ನು ವಶಪಡಿಸುವ ಮೊದಲು ನನಗೂ ಅಬಕಾರಿ ಇಲಾಖೆರವರಿಗೂ ಯಾವುದೇ ರೀತಿಯ ದ್ವೇಷ ಇದ್ದಿರಲಿಲ್ಲ. ನನ್ನ ಕಾರನ್ನು ಅಬಕಾರಿ ಇಲಾಖೆಯವರು ವಶಪಡಿಸುವ ಮುಂಚಿತ ಪ್ರಾ .ಸಾ–1 ಸತೀಶ್ ಕುಮಾರ್‌ರವರ ಪರಿಚಯ ಇದ್ದಿರಲಿಲ್ಲ. ದಿ:14–11–2006ರಂದು ರಾತ್ರಿ 5–30 ಗಂಟೆಗೆ ಸುರತ್ಕಲ್ ಮಂಗಳೂರು ರಾಷ್ಟ್ರೀಯ ಹೆದ್ದಾರಿಯಲ್ಲಿ ವಾಹನದಲ್ಲಿ ಅಕ್ರಮವಾಗಿ ನಕಲಿ ಮದ್ಯ ಸಾಗಾಟವಾಗುತ್ತಿದೆ ಎಂಬ ಖಚಿತ ವರ್ತಮಾನದ ಮೇರೆಗೆ ಪ್ರಾ.ಸಾ–1 ಇತರ ಸಿಬ್ಬಂಧಿ ರಸ್ತೆಗಾವಲು ನಡೆಸುತ್ತಿದ್ದಾಗ ಸುರತ್ಕಲ್ ನಿಂದ ನಂತೂರು ಕಡೆಗೆ ನಾನು ಚಲಾಯಿಸುತ್ತಿದ್ದ ವಾಹನ KA-19-A-987 ಅಂಬಾಸಿಡರ್ ಕಾರನ್ನು ಅಬಕಾರಿ ಇಲಾಖೆಯವರು ತಡೆದು ನಿಲ್ಲಿಸಿ ಅದರಲ್ಲಿ ನಾನು ಮತ್ತು ಇತರ ಇಬ್ಬರು ಆರೋಪಿಗಳು ಅಕ್ರಮವಾಗಿ ಸಾಗಿಸುತ್ತಿದ್ದ ಮದ್ಯದ ಬಾಟಲಿಗಳನ್ನು ವಶಪಡಿಸಿಕೊಂಡು ಮಹಜರು ಮುಖೇನಾ ಸ್ವಾಧೀನಪಡಿಸಿ ಕೊಂಡಿರುತ್ತಾರೆಂದರೆ ಸರಿಯಲ್ಲ, ಆ ಸಮಯ ನಾನು ತಪ್ಪಿಸಿ ಓಡಿ ಹೋಗಿರುತ್ತೇನೆಂದರೆ ಸರಿಯಲ್ಲ, ನಾನು ಈ ಅಕ್ರಮ ಸಾಗಾಟದಲ್ಲಿ ನೇರ ಭಾಗಿಯಾಗಿರುತ್ತೇನೆಂದರೆ ಸರಿಯಲ್ಲ, ಪ್ರಥಮ ದರ್ಜೆ ನ್ಯಾಯಾಲಯ,ಮಂಗಳೂರು ಇಲ್ಲಿ ಈ ಪ್ರಕರಣದ ಅಡಿಯಲ್ಲಿ ಅಬಕಾರಿ ಇಲಾಖೆಯವರು ನನ್ನ ವಿರುದ್ದ ದೋಷಾರೋಪಣಾ ಪಟ್ಟಿ ಸಲ್ಲಿಸಿರುತ್ತಾರೆ. ನಾನು ಮುಖ್ಯ ವಿಚಾರಣೆಯಲ್ಲಿ ಹೇಳಿದ ಅಂಶಗಳು ಸುಳ್ಳು ಎಂದು ಹೇಳಿದರೆ ಸರಿಯಲ್ಲ ಎಂದು ಉತ್ತರಿಸಿರುತ್ತಾರೆ .

ಪ್ರಕರಣದ ಎಲ್ಲಾ ದಾಖಲಾತಿಗಳನ್ನು,ಪ್ರಾ.ಸ–1, ಪ್ರಾ.ಸ–2 ಮತ್ತು ಡಿಡಬ್ಲ್ಯೂ–1 ರವರ ಸಾಕ್ಷಿ ವಿಚಾರಣೆಯನ್ನು ಹಾಗೂ ಅಭಿಯೋಗ ಪರ ಮತ್ತು ರಕ್ಷಣಾ ಪರ ವಕೀಲರ ವಾದವಿವಾದವನ್ನು ಅಲಿಸಿ, ತನಿಖಾಧಿಕಾರಿಯವರ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿದಾಗ ದಿ:14–11–2006ರಂದು ಜಪ್ತು ಪಡಿಸಿರುವ ಅಂಬಾಸಿಡರ್ ಕಾರು ಸಂ:KA-19-A-987 ರಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೇ 180.000 ಲೀಟರು ನಕಲಿ ಮದ್ಯವನ್ನು ಹೊಂದಿ ಸಾಗಾಣಿಕೆಯಾಗಿರುವುದು ಸಾಭೀತಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಇಂತಹ ಅಕ್ರಮ ಮದ್ಯ ಸಾಗಾಟ ತನ್ನ ತಿಳುವಳಿಕೆಗೆ ಬಾರದೇ ನಡೆದಿದೆ ಎಂಬುದನ್ನು ಸಾಕ್ಷದಾರಗಳೊಂದಿಗೆ ಸಾಭೀತುಪಡಿಸುವುದು ವಾಹನ ಮಾಲೀಕರ ಆದ್ಯ ಹೊಣೆಗಾರಿಕೆ ಯಾಗಿರುತ್ತದೆ. ವಾಹನ ಮಾಲೀಕರು ಸ್ವತ: ವಾಹನದ ತಾತ್ಕಾಲಿಕ ಬಿಡುಗಡೆ ಪಡೆಯಲು ಮುಂದಾಗದೇ ತನ್ನ ಜಿ.ಪಿ.ಎ ದಾರರ ಮುಖಾಂತರ ಅರ್ಜಿ ಸಲ್ಲಿಸಿ ವಾಹನವನ್ನು ಮಧ್ಯಂತರ ಬಿಡುಗಡೆಗೆ ಪಡೆದಿರುವುದು , ಪ್ರಾಧಿಕಾರದಿಂದ ರಕ್ಷಣಾ ಸಾಕ್ಷಿ ಹಾಜರುಪಡಿಸಲು ಅವಕಾಶ ನೀಡಿದ್ದಾಗ ವಾಹನದ ಮಾಲೀಕರು ಖುದ್ದಾಗಿ ರಕ್ಷಣಾ ಸಾಕ್ಷಿ ನೀಡಲು ಮುಂದಾಗದೇ ಪ್ರಕರಣ ಸಂದರ್ಭದಲ್ಲಿ ವಾಹನವನ್ನು ಚಲಾಯಿಸುತ್ತಿದ್ದ ಚಾಲಕನನ್ನು ರಕ್ಷಣಾ ಸಾಕ್ಷಿ ನೀಡಲು ಹಾಜರುಪಡಿಸಿರುವುದು, ವಾಹನದ ಚಾಲಕನು ಪ್ರಾಧಿಕಾರದ ಮುಂದೆ ಸಾಕ್ಷಿ ನೀಡುವ ಸಂದರ್ಭದಲ್ಲಿ ವಾಹನವನ್ನು ಯಾವುದೇ ಅಕ್ರಮ ವ್ಯವಹಾರಕ್ಕೆ ಬಳಸಬಾರದು ಎಂದು ವಾಹನದ ಮಾಲೀಕರು ಚಾಲಕನೊಂದಿಗೆ ಯಾವುದೇ ತಾಕೀತು ಮಾಡಿದ ಬಗ್ಗೆ ವಿವರಣೆ ನೀಡಿರುವುದಿಲ್ಲ, ವಾಹನದ ಮಾಲೀಕರು ಚಾಲಕನನ್ನು ನೇಮಿಸುವ ಸಂದರ್ಭದಲ್ಲಿ ಯಾವುದೇ ಲಿಖಿತ ಮುಚ್ಚಳಿಕೆ ಪತ್ರವನ್ನು ಮಾಡದೇ ಇರುವುದು ಇತ್ಯಾದಿ ಅಂಶಗಳನ್ನು ಅವಲೋಕಿಸಿದಾಗ ವಾಹನದ ಮಾಲೀಕರು ವಾಹನವನ್ನು ತನ್ನ ತಿಳುವಳಿಕೆಗೆ ಬಾರದೇ ಅಕ್ರಮ ಮದ್ಯ ಸಾಗಾಣಿಕೆ ಉಪಯೋಗಿಸಲಾಗಿದೆ ಎಂದು ಖುದ್ದಾಗಿ ಪ್ರಾಧಿಕಾರದ ಮುಂದೆ ಹಾಜರಾಗಿ ರುಜುವಾತು ಪಡಿಸಲು ವಿಫಲರಾಗಿರುವುದರಿಂದ, ಸದ್ರಿ ವಾಹನವನ್ನು ಅಕ್ರಮ ನಕಲಿ ಮದ್ಯ ಸಾಗಾಣಿಕೆಗೆ ಬಳಸಿರುವುದು ನಿಸ್ಸಂದೇಹವಾಗಿ ಸಾಭೀತಾಗಿರುತ್ತದೆ. ಈ ಮೇಲಿನ ಕಾರಣಗಳಿಂದ ಎರಡನೇಯ ಅಂಶವನ್ನು ನಕಾರಾತ್ಮಕವಾಗಿ ಪರಿಗಣಿಸಿದೆ.

